# ಕಾವ್ಯಮಂಜರಿ

## ಪಿ. ಯು. ಸಿ. ಪರೀಕ್ಷೆಯ

## ಕನ್ನಡ ಕಾವ್ಯಭಾಗ



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

೧೯೫೭

ಪ್ರಕಾಶಕರು
ಎಸ್. ಎಸ್. ಒಡೆಯರ,
ಎಂ ಎ, ಎಲ್ಎಲ್ ಬಿ.
ರಜಿಸ್ಟ್ರಾರರು
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ



ಬೆಲೆ .
**ಒಂದು ರೂಪಾಯಿ**

ಮುದ್ರಕರು :
ಆರ್. ಟಿ. ಬಿಳಗಿ
ಲಿಂಗರಾಜ ಆರ್ಟ ಪ್ರೆಸ್
ಮನೆ ನಂ. ೩೨೦
ಧಾರವಾಡ

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಭ್ಯಾಸಮಂಡಲದವರು ಕಾಲೇಜಿನ ಪ್ರಥಮ ವರ್ಷ ( F. Y. Arts ) ದ ಕನ್ನಡ ವಿದ್ಯಾರ್ಥಿಗಳಿಗಾಗಿ ಒಂದು ಕಾವ್ಯ ಸಂಕಲನವನ್ನು ಸಿದ್ಧಪಡಿಸಬೇಕೆಂದು ನಿರ್ಧಾರ ಮಾಡಿ, ಈ ಯೋಜನೆಗೆ ಅನುಮತಿಯನ್ನು ಕೊಡಬೇಕೆಂದು ವಿಶ್ವವಿದ್ಯಾಲಯದ ಸಿಂಡಿಕೇಟಿನವರನ್ನು ಪ್ರಾರ್ಥಿಸಿದರು. ಅವರ ಅನುಮತಿ ದೊರೆತ ಬಳಿಕ ಅಭ್ಯಾಸಮಂ[illegible]ರು ಗದ್ಯಪದ್ಯಭಾಗಗಳನ್ನು ಆಯ್ದು ಇಡಿಯ ಸಂಕಲನದ ಸಂಪಾದನೆಯ ಕಾರ್ಯವನ್ನು ಪ್ರೊ. ವ್ಹಿ. ಜಿ ಕುಲಕರ್ಣಿ ( ಅಧ್ಯಕ್ಷ ), ಪ್ರೊ. ಎಸ್.ಎಸ್. ಭೂಸನೂರಮಠ, ಪ್ರೊ. ತೀ.ನಂ. ಶ್ರೀಕಂಠಯ್ಯ ಹಾಗೂ ಪ್ರೊ. ಆರ್. ಸಿ ಹಿರೇಮಠ ಇವರನ್ನೊಳಕೊಂಡ ಉಪಸಮಿತಿಗೆ ಒಪ್ಪಿಸಿದರು. ಉಪಸಮಿತಿಯವರು ಸಂಗ್ರಹಿಸಿ ಸಂಪಾದಿಸಿ ಸಿದ್ಧಪಡಿಸಿದ ಸಂಕಲನವೇ ಈ 'ಕಾವ್ಯಮಂಜರಿ'. ಪುಸ್ತಕದ ಕೊನೆಯಲ್ಲಿ ಕವಿಗಳ ಹಾಗೂ ಸಂಕಲಿತ ಭಾಗಗಳ ವಿಷಯವಾಗಿ ಒಂದೆರಡು ಪರಿಚಯ ವಾಕ್ಯಗಳನ್ನೂ, ಕಠಿಣವೆನಿಸಬಹುದಾದ ಕೆಲವು ಶಬ್ದಗಳ ಅರ್ಥವನ್ನೂ ಕೊಡಲಾಗಿದೆ. ಹಳಗನ್ನಡದ ಕಾವ್ಯಭಾಗಗಳಲ್ಲಿ ಱಕಾರ ೞಕಾರಗಳನ್ನೂ ಮಿಕ್ಕವುಗಳಲ್ಲಿ ೞಕಾರ ಕಾರವನ್ನೂ ನಿರ್ದೇಶಿಸಿದೆ, 'ಗೀತಗಳಲ್ಲಿ' ಮಾತ್ರ ಈ ಅಕ್ಷರಗಳನ್ನು ಗುರುತಿಸಿಲ್ಲ. ಈ ಸಂಕಲನವು ನಮ್ಮ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗೂ ಇತರ ಸಾಹಿತ್ಯಾಭ್ಯಾಸಿಗಳಿಗೂ ಉಪಯುಕ್ತವಾಗುವುದೆಂದು ಆಶಿಸುತ್ತೇವೆ.

ಎಲ್ಲ ಬಗೆಯ ಸಹಾಯಸಹಕಾರಗಳನ್ನು ನೀಡಿದ್ದಕ್ಕಾಗಿ ವಿಶ್ವ ವಿದ್ಯಾಲಯದ ಅಧಿಕಾರಿಗಳಿಗೆ ಉಪಸಮಿತಿಯವರು ಕೃತಜ್ಞರಾಗಿದ್ದಾರೆ. ಕೊನೆಯದಾಗಿ, ನನಗೆ ಎಲ್ಲ ರೀತಿಯ ಸಹಾಯವನ್ನು ನೀಡಿದ್ದಕ್ಕಾಗಿ ಕನ್ನಡ ಅಭ್ಯಾಸಮಂಡಲದ ಸದಸ್ಯರಿಗೆ ನನ್ನ ವೈಯಕ್ತಿಕವಾದ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಮುದ್ರಣ ಕಾರ್ಯವನ್ನು ಆಸ್ಥೆಯಿಂದ ಅಲ್ಪಾವಧಿಯಲ್ಲಿಯೇ ನೆರವೇರಿಸಿ ಕೊಟ್ಟ ಲಿಂಗರಾಜ ಆರ್ಟ ಪ್ರೆಸ್ಸಿನ ಒಡೆಯರ ಆಭಾರವನ್ನು ಮನ್ನಿಸುತ್ತೇನೆ.

ವ್ಹಿ. ಜಿ. ಕುಲಕರ್ಣಿ

# ಪುನರ್ಮುದ್ರಣ

ಈ ಸಂಕಲನದಲ್ಲಿ ಪ್ರಕಟವಾದ ಕಾವ್ಯಮಂಜರಿಯ ಭಾಗಗಳನ್ನು ಈ ಸಲದ ಪ್ರಿ-ಯುನಿವ್ಹರಸಿಟಿ ಪರೀಕ್ಷೆಗೆ ಹಚ್ಚಲಾಗಿದೆ. ಮೊದಲ ಮುದ್ರಣದ ಪ್ರತಿಗಳು ಮುಗಿದುದರಿಂದ ಈ ಭಾಗಗಳನ್ನಿಲ್ಲಿ ಪುನರ್ಮುದ್ರಿಸಲಾಗಿದೆ ಈ ಕಾರ್ಯದಲ್ಲಿ ನೆರವಾದವರಿಗೆಲ್ಲ ಧನ್ಯವಾದಗಳನ್ನರ್ಪಿಸುತ್ತೇವೆ

**ಎಸ್. ಎಸ್. ಒಡೆಯರ**
ರಜಿಸ್ಟ್ರಾರರು,
ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ
ಜೂನ ೨೭, ೧೯೫೮

# ವಿಷಯಸೂಚಿಕೆ

# ಕಾವ್ಯಮಂಜರಿ

## ೧

## ಬಸವಣ್ಣನವರು : ‘ ವಚನಗಳು ’

೧

ಹಾಲ ತೊಱೆಗೆ ಬೆಲ್ಲದ ಕೆಸಱು, ಸಕ್ಕರೆಯ ಮಳಲು.
ತವರಾಜದ ನೊರೆತೆರೆಯಂತೆ,
ಆದ್ಯರ ವಚನವಿರಲು,
ಬೇಱೆ ಬಾವಿಯ ತೋಡಿ ಉಪ್ಪುನೀರನುಂಬುವನ ವಿಧಿಯಂತೆ
ಆಯಿತ್ತೆನ್ನ ಮತಿ, ಕೂಡಲ ಸಂಗಮದೇವಾ.

೨

ಸಂಸಾರಸಾಗರದ ತೆಱೆ ಕೊಬ್ಬಿ
ಮುಖದ ಮೇಲೆ ಅಲೆಯುತ್ತಿದ್ದುದೇ ನೋಡಾ !
ಸಂಸಾರಸಾಗರ ಉರದುದ್ದವೆ ? ಹೇಳಾ !
ಸಂಸಾರಸಾಗರ ಸಿರದುದ್ದವಾದ ಬಳಿಕ ಏನ ಹೇಳುವೆನಯ್ಯಾ !
ಅಯ್ಯಾ, ಅಯ್ಯಾ, ಎನ್ನ ಹುಯ್ಯಲ ಕೇಳಯ್ಯಾ.
ಕೂಡಲಸಂಗಮದೇವಾ, ನಾನೇವೆನೇವೆನಯ್ಯಾ ?

೩

ಇಂದಿಂಗೆಂತು ನಾಳಿಂಗೆಂತು ಎಂದು—
ಬಂದೊಡಲ ಹೊರೆಯಹೋಯಿತ್ತೆನ್ನ ಸಂಸಾರ !
ಹಿಂದೆ ನಾನಾಯೋನಿಯಲ್ಲಿ ಬಂದೆನೆಂಬ ಹೇಯವಿಲ್ಲ !
ಮುಂದೆ ಮುಕ್ತಿಯಾಗಬೇಕೆಂಬ ಯುಕ್ತಿಯಿಲ್ಲ !
ಎಂದೆಂದೂ ಸದಾಶಿವನ ಕುಂದದೆ ನೆನೆಯಲೀಯದೆ
ಕೊಂದುದಯ್ಯಾ ಈ ಮಾಯೆ, ಕೂಡಲಸಂಗಮದೇವಾ

೪

ಅಂದಣವನೇಱಿದ ಸೊಣಗನಂತೆ—
ಕಂಡೊಡೆ ಬಿಡದು ಮುನ್ನಿನ ಸ್ವಭಾವವನು,
ಸುಡು ! ಸುಡು ! ಮನವಿದು ವಿಷಯಕ್ಕೆ ಹರಿವುದು,
ಮೃಡ, ನಿಮ್ಮನನುದಿನ ನೆನೆಯಲೀಯದು.
ಎನ್ನೊಡೆಯ ಕೂಡಲಸಂಗಮದೇವಾ,
ನಿಮ್ಮ ಚರಣವ ನೆನೆವಂತೆ ಕರುಣಿಸು,
ಸೆಱಗೊಡ್ಡಿ ಬೇಡುವೆ, ನಿಮ್ಮ ಧರ್ಮ.

೫

ಬೆಳೆಭೂಮಿಯೊಳೊಂದು ಪ್ರಳಯದ ಕಸ ಹುಟ್ಟಿ
ತಿಳಿಯಲೀಯದು, ಎಚ್ಚಱಲೀಯದು !
ಎನ್ನವಗುಣವೆಂಬ ಕಸವ ಕಿತ್ತು ಸಲಹಯ್ಯಾ, ಲಿಂಗತಂದೆ;
ಸುಳಿದೆಗೆದು ಬೆಳೆವೆನು, ಕೂಡಲಸಂಗಮದೇವಾ.

೬

ಬಡಪಸು ಪಂಕದಲ್ಲಿ ಬಿದ್ದೊಡೆ ಕಾಲ ಬಡಿವುದಲ್ಲದೆ
ಬೇಱೆ ಗತಿಯುಂಟೆ ?
ಶಿವಶಿವಾ ! ಹೋದಹೆ ಹೋದಹೆನಯ್ಯಾ !
ನಿಮ್ಮ ಮನದತ್ತಲೆನ್ನ ತೆಗೆಯಯ್ಯಾ—
ಪಶುವಾನು, ಪಶುಪತಿ ನೀನು !
ತುಡುಗುಣಿಯೆಂದು ಎನ್ನ ಹಿಡಿದು ಬಡಿಯದ ಮುನ್ನ,
ಒಡೆಯ ನಿಮ್ಮ ಬಯ್ಕದಂತೆ ಮಾಡು,
ಕೂಡಲಸಂಗಮದೇವಾ

೭

ಮಡಕೆಯ ಮಾಡುವರೆ ಮಣ್ಣೇ ಮೊದಲು,
ತೊಡಿಗೆಯ ಮಾಡುವರೆ ಹೊನ್ನೇ ಮೊದಲು;
ಶಿವಪಥವನಱಿವರೆ ಗುರುಪಥವೇ ಮೊದಲು;
ಕೂಡಲಸಂಗಮದೇವರನಱಿವರೆ ಶರಣರ ಸಂಗವೇ ಮೊದಲು.

೮

ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯಾ,
ರಾಶಿಕೂಟ ಋಣಸಂಬಂಧವುಂಟೆಂದು ಹೇಳಿರಯ್ಯಾ,
ಚಂದ್ರಬಲ ತಾರಾಬಲವುಂಟೆಂದು ಹೇಳಿರಯ್ಯಾ;
ನಾಳಿನ ದಿನಕಿಂದಿನ ದಿನ ಲೇಸೆಂದು ಹೇಳಿರಯ್ಯಾ,
ಕೂಡಲಸಂಗಮದೇವನ ಪೂಜಿಸಿದ ಫಲ ನಿಮ್ಮದಯ್ಯಾ !

೯

ಎನಿಸುಕಾಲ ಕಲ್ಲು ನೀರೊಳಗಿರ್ದರೇನ,
  ನೆನೆದು ಮೃದುವಾಗಬಲ್ಲುದೇ ?
ಎನಿಸುಕಾಲ ನಿಮ್ಮ ಪೂಜಿಸಿ ಏವೆನಯ್ಯಾ,
  ಮನದಲ್ಲಿ ದೃಢವಿಲ್ಲದನ್ನಕ್ಕ ?
ನಿಧಾನವ ಕಾಯ್ದಿರ್ದ ಬೆಂತರನಂತೆ !—
ಅದಱ ವಿಧಿಯೆನಗಾಯಿತ್ತು, ಕೂಡಲಸಂಗಮದೇವಾ

೧೦

  ಲೋಕದ ಡೊಂಕ ನೀವೇಕೆ ತಿದ್ದುವಿರಿ ?
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ,
  ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ.
ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ
  ಕೂಡಲಸಂಗಮದೇವ.

೧೧

ಹೂಲೆಯ ಹೊಲಬಿಗನಾದರೆ
  ಅವನ ಹೊರೆಯಲಿಪ್ಪುದು ಲೇಸು ಕಂಡಯ್ಯಾ.
ಹೊಲಬುಗೆಡದೆ ಲಿಂಗ ಶರಣೆನ್ನಿರಯ್ಯಾ,
  ಹೊಲಬುಗೆಡಬೇಡ, ಶಿವ ಶರಣೆನ್ನಿರಯ್ಯಾ.
ನಮ್ಮ ಕೂಡಲಸಂಗನ ಮಹಾಮನೆಯೊಳು,
  ' ಮಾದಾರ ಚೆನ್ನಯ್ಯ ಹೊಲಬಿಗನಯ್ಯಾ.

೧೨

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ;
  ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ,
  ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ,
  ಕೂಡಲಸಂಗಮದೇವಾ.

೧೩

ನರೆ ಕೆನ್ನೆಗೆ, ತೆರೆ ಗಲ್ಲಕೆ, ಶರೀರ ಗೂಡುವೋಗದ ಮುನ್ನ,
ಹಲ್ಲು ಹೋಗಿ, ಬೆನ್ನು ಬಾಗಿ, ಅನ್ಯರಿಗೆ ಹಂಗಾಗದ ಮುನ್ನ,
ಕಾಲ ಮೇಲೆ ಕೈಯನೂರಿ ಕೋಲ ಹಿಡಿಯದ ಮುನ್ನ,
ಮುಪ್ಪಿಂದೊಪ್ಪವಳಿಯದ ಮುನ್ನ, ಮೃತ್ಯು ಮುಟ್ಟದ ಮುನ್ನ—
ಪೂಜಿಸು ನಮ್ಮ ಕೂಡಲಸಂಗಮದೇವನ.

೧೪

ಹೊಯ್ದರೆ ಹೊಯ್ಗಳು ಕಯ್ಯ ಮೇಲೆ,
ಬಯ್ದರೆ ಬಯ್ಗಳು ಕಯ್ಯ ಮೇಲೆ!
ಒಂದಿನ ಜನನವೇನಾದೊಡಾಗಲಿ—
ಇಂದಿನ ಭೋಗವು ಕಯ್ಯ ಮೇಲೆ!
ಕೂಡಲಸಂಗಮದೇವಯ್ಯಾ,
ನಿಮ್ಮ ಪೂಜಿಸಿದ ಫಲ ಕಯ್ಯ ಮೇಲೆ!

೧೫

ಮಾಡಿದೆನೆಂಬುದು ಮನದಲ್ಲಿ ಹೊಳೆದರೆ,
ಏಡಿಸಿ ಕಾಡಿತ್ತು ಶಿವನ ಡಂಗುರ!
ಮಾಡಿದೆನೆನ್ನದಿರಾ ಲಿಂಗಕ್ಕೆ, ಮಾಡಿದೆನೆನ್ನದಿರಾ ಜಂಗಮಕ್ಕೆ.
ಮಾಡಿದೆನೆಂಬುದು ಮನದಲ್ಲಿಲ್ಲದಿದ್ದರೆ,
ಬೇಡಿತ್ತನೀವ ಕೂಡಲಸಂಗಮದೇವ.

೧೬

ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ;
ಮುನಿಯಬೇಡ, ಅನ್ಯರಿಗೆ ಅಸಹ್ಯಬಡಬೇಡ,
ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ.
ಇದೇ ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ,
ಇದೇ ನಮ್ಮ ಕೂಡಲಸಂಗಮದೇವರನೊಲಿಸುವ ಪರಿ!

೧೭

ದೇವಲೋಕ ಮರ್ತ್ಯಲೋಕವೆಂಬುದು ಬೇಱಿಲ್ಲ ಕಾಣಿ ಭೋ !
ಸತ್ಯವ ನುಡಿವುದೆ ದೇವಲೋಕ, ಮಿಥ್ಯವ ನುಡಿವುದೆ ಮರ್ತ್ಯಲೋಕ
ಆಚಾರವೇ ಸ್ವರ್ಗ, ಅನಾಚಾರವೇ ನರಕ—
ಕೂಡಲಸಂಗಮದೇವಾ, ನೀವೇ ಪ್ರಮಾಣು.

೧೮

ದಯವಿಲ್ಲದ ಧರ್ಮವದೇವುದಯ್ಯಾ ?
ದಯವೇ ಬೇಕು ಸಕಲಪ್ರಾಣಿಗಳೆಲ್ಲಱಲ್ಲಿಯೂ;
ದಯವೇ ಧರ್ಮದ ಮೂಲವಯ್ಯಾ,
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ.

೧೯

ಎನ್ನಿಂದ ಕಿಱಿಯರಿಲ್ಲ, ಶಿವಭಕ್ತರಿಂದ ಹಿರಿಯರಿಲ್ಲಾ –
ನಿಮ್ಮ ಪಾದ ಸಾಕ್ಷಿ, ಎನ್ನ ಮನ ಸಾಕ್ಷಿ,
ಕೂಡಲಸಂಗಮದೇವಾ, ಎನಗಿದೇ ದಿಬ್ಯ !

೨೦

ಭಕ್ತಿಯಿಲ್ಲದ ಬಡವ ನಾನಯ್ಯಾ; ಕಕ್ಕಯ್ಯನ ಮನೆಯಲು ಬೇಡಿದೆ;
ಚೆನ್ನಯ್ಯನ ಮನೆಯಲು ಬೇಡಿದೆ;
ದಾಸಯ್ಯನ ಮನೆಯಲೂ ಬೇಡಿದೆ.
ಎಲ್ಲಾ ಪುರಾತರು ನೆರೆದು ಭಕ್ತಿಭಿಕ್ಷವನಿಕ್ಕಿದರೆ,
ಎನ್ನ ಪಾತ್ರೆ ತುಂಬಿತ್ತು, ಕೂಡಲಸಂಗಮದೇವಾ.

೨೧

ಎನ್ನಲ್ಲಿ ಭಕ್ತಿ ಸಾಸವೆಯ ಷಡ್ಭಾಗದನಿತಿಲ್ಲ;
ಎನ್ನ ಭಕ್ತನೆಂಬರು, ಎನ್ನ ಸಮಯಾಚಾರಿಯೆಂಬರು !
ನಾನೇನು ಪಾಪವ ಮಾಡಿದೆನೊ .
ಬೆಳೆಯದ ಮುನ್ನವೆ ಕೊಯ್ವರೆ ? ಹೇಳಾ ಅಯ್ಯಾ !
ಇಱಿಯದ ವೀರ ! ಇಲ್ಲದ ಸೊಬಗವ
ಎಲ್ಲಾ ಒಡಯರು ಏಱಿಸಿ ನುಡಿವರು !
ಎನಗಿದು ವಿಧಿಯೆ ಕೂಡಲಸಂಗಮದೇವಾ ?

೨೨

ಎನ್ನವರೊಲಿದು ಹೊನ್ನ ಶೂಲದಲ್ಲಿಕ್ಕಿದರೆನ್ನ ಹೊಗಳಿ, ಹೊಗಳಿ !
ಎನ್ನ ಹೊಗಳತೆ ಎನ್ನನಿಮ್ಮೆಯ್ಗೊಂಡಿತ್ತಲ್ಲಾ !
ಅಯ್ಯಾ ನಿಮ್ಮ ಮನ್ನಣೆಯೇ ಮಸೆದಲಗಾಗಿ ತಾಗಿತ್ತಲ್ಲಾ !
ಅಯ್ಯೋ ! ನೊಂದೆನು, ಸೈರಿಸಲಾಱೆನು·
ಕೂಡಲಸಂಗಮದೇವಾ, ನೀನೆನಗೊಳ್ಳಿದನಾದರೆ,
ಎನ್ನ ಹೊಗಳತೆಗಡ್ಡಬಾರಾ, ಧರ್ಮೀ !

೨೩

ಹರಿವ ಹಾವಿಗಂಜೆ, ಉರಿಯ ನಾಲಗೆಗಂಜೆ,
ಸುರಗಿಯ ಮೊನೆಗಂಜೆ !
ಒಂದಕ್ಕಂಜುವೆ, ಒಂದಕ್ಕಳುಕುವೆ;
ಪರಸ್ತ್ರೀಪರಧನವೆಂಬೀ ಜೂಬಿಂಗಂಜುವೆ !
ಮುನ್ನಂಜದ ರಾವಣನೇವಿಧಿಯಾದ !
ಅಂಜುವೆನಯ್ಯಾ, ಕೂಡಲಸಂಗಮದೇವಾ.

೨೪

ಗಿಳಿಯ ಹಂಜರವಿಕ್ಕಿ, ನೊಡರಿಂಗೆಣ್ಣೆಯನೆಱೆದು, ಬತ್ತಿಯನಿಕ್ಕಿ
ಬರವ ಹಾರುತ್ತಿದ್ದೆನೆಲಗವ್ವಾ
ತಱಗೆಲೆ ಗಿಱಕೆಂದೊಡೆ ಹೊಱಗನಾಲಿಸುವೆ
ಅಗಲಿದೆನೆಂದೆನ್ನ ಮನ ಧಿಗಿಲೆಂದಿತ್ತೆಲಗವ್ವಾ !
ಕೂಡಲಸಂಗನ ಶರಣರು ಬಂದು, ಬಾಗಿಲ ಮುಂದೆ ನಿಂದು
' ಶಿವಾ ' ಎಂದರೆ, ಸಂತೋಷಬಟ್ಟೆನೆಲಗವ್ವಾ !

೨೫

ಅಂಗೈಯೊಳಗಣ ಲಿಂಗವ ನೋಡುತ್ತ
ಕಂಗಳು ಕಡೆಗೋಡಿವರಿವುತ್ತ ಸುರಿವುತ್ತ ಎಂದಿಪ್ಪೆನೋ ?
ನೋಟವೇ ಪ್ರಾಣವಾಗಿ ಎಂದಿಪ್ಪೆನೋ,
ಕೂಟವೇ ಪ್ರಾಣವಾಗಿ ಎಂದಿಪ್ಪೆನೋ,
ಎನ್ನಂಗವಿಕಾರದ ಸಂಗವಳಿದು,
' ಕೂಡಲಸಂಗಯ್ಯಾ, ಲಿಂಗಯ್ಯಾ, ಲಿಂಗಲಿಂಗಲಿಂಗ'ವೆನ್ನುತ್ತ '

೨೬

ಆಡಿ ಕಾಲು ದಣಿಯವು, ನೋಡಿ ಕಣ್ಣು ದಣಿಯವು,
ಹಾಡಿ ನಾಲಗೆ ದಣಿಯದು . ಇನ್ನೇವೆನಿನ್ನೇವೆ ?
ನಿಮ್ಮ ಕೈಯಾರೆ ಪೂಜಿಸಿ ಮನ ದಣಿಯಲೊಲ್ಲದಿನ್ನೇವೆನಿನ್ನೇವ ?
ಕೂಡಲಸಂಗಮದೇವ, ಕೇಳಯ್ಯಾ,
ನಿಮ್ಮುದರವ ಬಗಿದಾನು ಹೊಗುವ ಭರವೆನಗೆ !

೨೭

ನಿಮ್ಮ ನೋಟವನಂತಸುಖ, ಕೂಟ ಪರಮಸುಖ !
ಅವುಟು ಕೋಟಿ ರೋಮಂಗಳೂ ಕಂಗಳಾಗಿ ನೋಡುತ್ತಿದ್ದೆನು !
ಕೂಡಲಸಂಗಮದೇವಯ್ಯಾ, ನಿಮ್ಮ ನೋಡಿ ನೋಡಿ,
ಮನದಲ್ಲಿ ರತಿ ಹುಟ್ಟಿ ನಿಮಿರ್ದುವೆನ್ನ ಕಳೆಗಳು !

೨೮

ಅಡಿಗಡಿಗೆ ಲಿಂಗವನಡರಿಯಡರಿ, ನೋಡಿ ನೋಡಿ ಕಂಗಳು,
ಕಡೆಗೋಡಿವರಿದುವೆನಗಯ್ಯಾ ಎನ್ನ ಅಶ್ರುಜಲಂಗಳು !
ಆಲಿಕಲ್ಲ ರೂಹಿನಂತೆ, ಅರಗಿನ ಪುತ್ಥಳಿಯಂತೆ
ತನು ಪುಳಕಿತವಾದ ಬೆಮರ ಬಿಂದುಗಳೆಲ್ಲಾ !
ಕೂಡಲಸಂಗನ ದರ್ಶನಸ್ಪರ್ಶನದಿಂದ—
ಮನವೊಲಿದು ನೆರೆವ ಭರವನೇನ ಹೇಳುವೆನಯ್ಯಾ !

೨೯

ಎನ್ನ ಕಾಯವ ದಂಡಿಗೆಯ ಮಾಡಯ್ಯಾ;
ಎನ್ನ ಸಿರವ ಸೋರೆಯ ಮಾಡಯ್ಯಾ,
ಎನ್ನ ನರವ ತಂತಿಯ ಮಾಡಯ್ಯಾ,
ಎನ್ನ ಬೆರಳ ಕಡ್ಡಿಯ ಮಾಡಯ್ಯಾ !
ಬತ್ತೀಸರಾಗವ ಹಾಡಯ್ಯಾ, ಉರದಲೊತ್ತಿ ಬಾರಿಸು.
ಕೂಡಲಸಂಗಮದೇವಾ.

೩೦

ವಚನದಲ್ಲಿ ನಾಮಾಮೃತ ತುಂಬಿ,
ನಯನದಲ್ಲಿ ಮೂರುತಿ ತುಂಬಿ,
ಮನದಲ್ಲಿ ನಿಮ್ಮ ನೆನಹು ತುಂಬಿ,
ಕಿವಿಯಲ್ಲಿ ಕೀರುತಿ ತುಂಬಿ,
ಕೂಡಲಸಂಗಮದೇವಾ,
ನಿಮ್ಮ ಚರಣಕಮಲದಲಾನು ತುಂಬಿ !

೩೧

ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ
ಲಿಂಗವೆಂಬ ಎಲೆಯಾಯಿತ್ತು.
ಲಿಂಗವೆಂಬ ಎಲೆಯ ಮೇಲೆ
ವಿಚಾರವೆಂಬ ಹೂವಾಯಿತ್ತು,
ಆಚಾರವೆಂಬ ಕಾಯಾಯಿತ್ತು.
ನಿಷ್ಪತ್ತಿಯೆಂಬ ಹಣ್ಣಾಯಿತ್ತು.
ನಿಷ್ಪತ್ತಿಯೆಂಬ ಹಣ್ಣು ತೊಟ್ಟುಬಿಟ್ಟು ಕಳಚಿ ಬೀಳುವಲ್ಲಿ
ಕೂಡಲಸಂಗಮದೇವ ತಮಗೆ ಬೇಕೆಂದು ಎತ್ತಿಕೊಂಡ.

## ೨

# ಹರಿಹರ ‘ ಪುಷ್ಪರಗಳೆ ’

ಲೀಲೆಯೊಳೋಲೈಸಂ ಮಧು
ರಾಲಾಪದೆ ಪುಷ್ಪರಗಳೆಯೆಂಬೀ ಪೊಸಪೂ
ಮಾಲೆಯನವಧರಿಸಗಜಾ
ಲೋಲ ಮಹಾಶೀಲ ಹಂಪೆಯ ವಿರೂಪಾಕ್ಷ '

ಶ್ರೀಸಕಲಸುರಮಕುಟನಿಕರರಂಜಿತಚರಣ
ಭಾಸುರಾದಿತ್ಯಕೋಟಿಪ್ರಭಾಘನಕಿರಣ ।
ಹರುಷದಿಂ ಬೇಡುವೆಂ ನಿನ್ನನುತ್ಸವದಿಂದೆ
ಕರುಣಿಪುದು ಹಂಪೆಯ ವಿರೂಪಾಕ್ಷ ದಯೆಯಿಂದೆ ।
ಪೊಚ್ಚಪೊಸಪೂಗಳಿಂದರ್ಚಿಸುವುದಂ ದೇವ
ಅಚ್ಚರಿಯೊಳಿತ್ತು ಕರುಣಿಸುವುದೆನಗೆಲೆ ದೇವ ।
ಎಂದು ಪಂಪಾಪುರದೊಳಾನೆಳ್ದು ಕೊಂಡಾಡಿ
ಮುಂದೆ ಜಾವದೊಳೆ ಭಸಿತೋದ್ಧೂಳನಂ ಮಾಡಿ ।
ಪರಿಮಳಪೊಸರದಂತೆ ಬಿಗಿದು ನೆಯ್ದೊಪ್ಪಿರ್ದ
ಹರಿಪರಿಯ ಕರಡಗೆಯನಾಂತುಕೊಂಡೆಸೆದಿರ್ದ ।

ನಿನ್ನ ಗೀತಂಗಳಂ ಹರುಷದಿಂ ಪಾಡುತುಂ
ನಿನ್ನ ಪದ್ಯಂಗಳಂ ಪುಳಕಿಸುತ್ತೋದುತುಂ ।
ನಿನ್ನ ವರ ಕೀರ್ತಿಯಂ ಕೈವಾರಿಸುತೆ ಬರುತೆ
ನಿನ್ನ ವರ ಮೂರ್ತಿಯಂ ನೆನೆದು ಕರಗುತೆ ಬರುತೆ ।
ಪರಿಮಳದ ಸುಗ್ಗಿ ಸೌರಭದ ಸಂದಣಿಯೆನಿಪ
ಸುರುಚಿರಾಮೋದದ ರಸಾಂಭೋಧಿಯೆಂದೆನಿಪ ।
ಸುರತರುಸುಗಂಧದ ತವರ್ಮನೆಯಿದೆಂದೆನಿಪ
ಉರವಣಿಪ ಕಂಪಿನ ಪರಮಸೀಮೆಯಿಂದೆನಿಪ ।
ಪೂದೋಂಟಮಂ ದೂರದಿಂ ಕಂಡು ಸೊಂಪೇಱಿ
ಆದ ಪರಮಾನಂದದಿಂದುಕ್ಕಿ ನಲವೇಱಿ ।
ಪುಟವೇಳುತಷ್ಟಮಂ ತಿಗಟಮಂ ಪರಿದಾಡಿ
ನಟನಂತಿರುಗ್ಗಡಿಸಿ ಕುಣಿಕುಣಿದು ಕೂಗಾಡಿ ।
ಬೆಳ್ಳವತ್ತಮನುತ್ತರಣಿಯನುನ್ಮತ್ತಮಂ
ಪಲ್ಲವಿತ ಕಕ್ಕೆಬಿಳಿಯೆಕ್ಕೆಗಳ ಮೊತ್ತಮಂ ।
ರುದ್ರಜಟೆಯಂ ತುಂಬೆಯಂ ಕಂಚಿವಾಳಮಂ
ಭದ್ರಮುಷ್ಟಿ ಮೊದಲಾದ ನವಪತ್ರಜಾಲಮಂ ।
ಕಂಡು ಪತ್ರಾಳಿಗಳ್ಗೆಱಗಿ ಶರಣೆಂದೆನುತೆ
ಕಂಡೆಂ ಫಲಂ ಪಿರಿದು ನೀವುಮಿಂತಿರಿಯೆನುತೆ ।
ಬಗೆಯಿಂ ಪೂವಂ ಕಂಡು ಮಿಗೆ ಶರಣು ನಿಮಗೆನುತೆ
ನಗುತಲ್ಲಿ ದೊಡ್ಡಿಪತ್ರೆಗೆ ಸೆಱೆ ನಮೋಯೆನುತೆ ।

ಬರವರಲ್ ಮುಂಗುಡಿಯ ಕಂಪು ಕರದಿಂ ತೀಡೆ
ಹರಹರ ವಿರೂಪಾಕ್ಷ ನಿನಗೆನುತ್ತಂ ಕೂಡೆ ।
ಮನದಿಂದೆ ಕೈಕೊಳ್ವ ಮುನ್ನವೀ ಗಂಧಮಂ
ನಿನಗೆ ಬಳಿಕೀವೆನುತ್ತಮಕುಸುಮವೃಂದಮಂ ।
ಎಂದರ್ಪಿಸುತ್ತೆ ಪೂದೋಂಟಮಂ ಕೈಮಿಕ್ಕು
ಬಂದು ಪುಳಕಿಸುತೆ ಪರಮಾನಂದದಿಂ ಪೊಕ್ಕು ।
ತೂಗಾಡಿ ತೊನೆದಾಡುತಾಹಾ ವಿರೂಪಾಕ್ಷ
ಪೂಗಳಂ ನಡೆನೋಡುತಾಹಾ ವಿರೂಪಾಕ್ಷ ।
ಎಂದೆನುತೆ ಹಿಗ್ಗಿ ಹೊಗಳುತ್ತೊಲ್ದು ನಲಿವುತ್ತೆ
ಚಂದಚಂದದ ಕುಸುಮವೃಂದಮಂ ನೋಡುತ್ತೆ ।
ಎನಗಿಂತು ಕರುಣಿಸಿದನೇ ಸದಾಶಿವ ಎನುತೆ
ಮನದೊಳಗೆ ಹರುಷದಿಂ ನಲಿನಲಿದು ನೋಡುತ್ತೆ ।
ಅಳಿಯೆಱಗದನಿಲನಲುಗದ ರವಿಕರಂ ಪುಗದ
ಬೆಳೆದು ನಳನಳಿಸಿ ಮಘಮಘಿಸುತ್ತೆ ಕವಿದಿಳಿದ ।
ಇರವಂತಿಯಿರೆ ಕಂಡು ನೋಡಲಣ್ಮದೆ ನಿಂದು
ಪರಶಿವಂಗೋಸ್ಕರ ಪೂವಸೀಯಲಾ ಎಂದು ।
ನನೆಮುಗುಳ ಕೊನೆಮುಗುಳ ಬಿರಿಮುಗುಳರಲ್ಗಳಂ
ತನಿಗಂಪು ತೀವಿರ್ದ ಪೊಚ್ಚಪೊಸ ಪೂಗಳಂ ।
ಕೊಂಡು ಕುಕಿಲಿಱುವುತುಂ ಕುಣಿಕುಣಿವುತುಂ ಬಂದು
ಕಂಡು ಸಂಪಗೆಯ ಮರನಿರ್ದೆಡೆಗೆ ನಡೆತಂದು ।

ಏನವ್ವ ಸಂಪಗೆಯೆ ಶಿವನ ಸಿರಿ ಮುಡಿಗಿಂದು
ನೀನೀವ ಪೊಸ ಕುಸುಮಮಂ ನೀಡು.ನೀಡೆಂದು ।
ಅಳಿಮನದ ಪರಿಯೆಂದು ಬಗೆಯದಿರ್ ನೀನೆನುತೆ
ತಿಳಿದು ಪೊಸ ಪೂಗಳಂ ನೀಡವ್ವ ನೀಡೆನುತೆ ।
ಅಂತವಂ ಕೊಂಡು ಸೇವಂತಿಯಲ್ಲಿಗೆ ಬಂದು
ಮುಂತೆ ಕುಂಕುಮದ ತಾರಗೆಗಳಂತಿರಲಂದು ।
ಎಲೆಲೆ ಪರಿಮಳದ ಕಣ್ಣುಂಗತಿಯೆ ಬಾರವ್ವ
ಕುಲಪತಿಯ ಜಡೆಗಳ್ಗೆ ಪೂಗಳಂ ತಾರವ್ವ ।
ದೇವಂಗೆ ದೇವರ ಶಿಖಾಮಣಿಯ ಜಡೆಮುಡಿಗೆ
ಸೇವಂತಿ ನೀನೀವ ಪೂಗಳಂ ನೀಡೆನಗೆ ।
ಎಂದು ಪರಿಮಳದ ಪಸಿನೀರ ಪೂವಂ ಕೊಂಡು
ಮುಂದೆ ತೋಱುತ್ತಿರ್ಪ ಪೂಗಿಡುಗಳಂ ಕಂಡು ।
ಅದೆ ಮಲ್ಲಿಕಾಲತೆ ವಿರೂಪಾಕ್ಷ ನಿನಗೆನುತೆ
ಅದೆ ಮಾಧವೀಲತೆ ವಿರೂಪಾಕ್ಷ ನಿನಗೆನುತೆ ।
ಮಲ್ಲಿಗೆಯ ಮುಂದಕ್ಕೆ ಮನವಾರೆ ನಡೆಗೊಂಡು
ಸಲ್ಲೀಲೆವೆರ್ಚಿ ಕಂಪಿನ ನಿಧಿಯಿರಲ್ ಕಂಡು ।
ಹಸುರಳಿದು ಬೆಳ್ಪಳಿದು ನನೆಯೋಱ್ ಹೊದೆದೋಱ್
ಹೊಸ ಪರಿಯ ಬಿರಿಮುಗುಳ್ಗಳಿರೆ ಬೀಗಿ ನಲವೇಱ್ ।
ಮಲ್ಲಿಗೆಯರಲ್ಗಳಂ ಮನವಾರೆ ತಿಱಿವುತುಂ
ಮೆಲ್ಲಮೆಲ್ಲನೆ ನೋಡುತಲ್ಲಲ್ಲಿ ಕುಣಿವುತುಂ ।

ಏನವ್ವ ಅದಿರ್ಗಂತಿ ತುಂಬಿ ತುಳುಕದ ಮುನ್ನ
ಆನಂದನಿಧಿ ಶಿವಂಗಳ್ಕಱಿಂದಂ ನಿನ್ನ ।
ಸುಖದ ಮೀಸಲ ನವಸುಗಂಧಮಂ ನೀಡೆನುತೆ
ಮುಖವ್ವೈದಱವಗೆ ಸಂದೊಡೆ ಬರ್ದುಂಕುವೆನೆನುತೆ ।
ಪೊಸ ಪೂವನಲ್ಲಿ ಕೊಂಡಾಡುತ್ತೆ ನಡೆತಂದು
ಎಸೆವ ಜಾತಿಯ ಸಮೀಪಕ್ಕೆ ಮನಮಂ ತಂದು ।
ಜಾತಿ ನೀನೇ ಸಕಲಪುಷ್ಪಜಾತಿಗೆ ಜಾತಿ
ಭೂತೇಶ್ವರನ ಜಡೆಯ ಮುಡಿಗೇಱಿದೊಡೆ ಜಾತಿ ।
ಎಂದು ಪೊಗಳುತ್ತಲ್ಲಿ ಪೊಸ ಪೂಗಳಂ ಕೊಂಡು
ಮುಂದೆ ಮಘಮಘಿಪ ಕೇತಕಿಯಿರೆ ಮನಂಗೊಂಡು ।
ಹೊಱಗೆ ಮುಳ್ಳೊಳಗೆ ಕಂಪಕ್ಕಕ್ಕು ನಿನ್ನ ಪರಿ
ಹೊಱಸೂಡಿದನ ಗುಪ್ತಭಕ್ತನಂತಿರ್ಪ ಪರಿ ।
ಆಹ ದೆಸೆದೆಸೆಗೆ ಬೀಱುವ ಸುಗಂಧದ ಸೂಱೆ
ಆಹ ಕೇತಕಿ ನಿನ್ನ ಪರಿಮಳದ ಪರಿ ಬೇಱೆ ।
ಪರಿಮಳಂ ಸುಳಿಗೊಂಡು ಬೆಳೆದು ಕವಲಿಱಿಯಿತ್ತೊ
ಉರವಣಿಸಿ ಬಳೆವ ಪರಿಮಳಕೆ ಗಱಿ ಮೂಡಿತ್ತೊ ।
ಎಂದಲ್ಲಿ ಪರಿಮಳದ ಕೇತಕಿಗಳಂ ಕೊಂಡು
ಮುಂದೆ ತೋಱುತ್ತಿರ್ಪ ಪದ್ಮಳಿಯಿರಲ್ ಕಂಡು ।
ತಾರೆಗಳ ಮೊಳೆಗಳಂತಿರ್ದ ಪದ್ಮಳಿಗಳಂ
ಹಾರೈಸುತುಂ ಕೊಂಡು ಬಿಳಿಯ ಕತ್ತುರಿಗಳಂ ।

ಹೇರಿಳೆ ಪರಿಮಳಾಡಾರಮಂ ನೀನಲ್ಲಿ
ಮಾರಾರಿಗೀಯೆನುತ್ತುಂ ಪೂಗೊಳುತ್ತಲ್ಲಿ ।
ಮೊಲ್ಲೆಯಂ ಮುದ್ದಾಡಿಸುತ್ತೆ ಮನ್ನಿಸಿ ನುಡಿದು
ವಲ್ಲಭಂಗಿವು ತಕ್ಕವೆನುತೆ ಪೂವಂ ಪಿಡಿದು ।
ತಿರುಗಿ ನೋಡಲ್ ಮರುಗಮಿತ್ತ ಬಾರೆನುತಮಿರೆ
ಹರ ಮಱೆದನೇ ಪರಿಮಳದ ಸಸಿಯಂನೆನುತ ಬರೆ
ತೆಗೆದುಕೊಳುತಲ್ಲಿ ಪರಿಮಳ ಪಲ್ಲವಂಗಳಂ
ಬಗೆ ಮಿಗಲ್ ಸಸಿಯ ಸೌರಭದ ಸಂದಣಿಗಳಿಂ ।
ಹಾರೈಸುತುಂ ಬಂದು ಮುಡಿವಾಳದೊಳ್ ನಿಂದು
ಬೇರ ಬಲ್ಲವರ್ಗೆ ನೀನೆಲೆದೋಱಲೆಂಕೆಂದು ।
ಪರಿಮಳದ ಬೇರ್ಗಳಂ ಮನವಾರೆ ತಿಱುವುತುಂ
ಪರಿಪರಿಯ ಕಂಪಿನೊಳ್ ಮುಳುಗುತುಂ ಮೂಡುತುಂ ।
ದವನವೇ ಶಿವನ ಪರಿಮಳದ ಹಬ್ಬವೆ ಬಾರ
ಭುವನದೊಳ್ ನಿನಗೆ ಸರಿಯಿಲ್ಲ ಸೌರಭಸಾರ ।
ಎನುತೆ ಕುಣಿವುತೆ ಕೂಗಿ ಕುಕಿಲಿಱುವುತುಂ ಬಂದು
ಕೊನರ್ವ ಪುಳಕಂಗಳಿಂ ಪಲ್ಲವಿಸುತುಂ ನಿಂದು ।
ಏನೆನ್ನ ಹೊನ್ನೆ ಸುರಹೊನ್ನೆ ಪರಿಮಳದರಸಿ
ನೀನೆನ್ನ ಸೋಮಯ್ಯನಂ ಪುಲಿಗೆಱಗೆ ಕರಸಿ ।
ಕೊಂಡೆ ಸದ್ಭಕ್ತಿ ಸರಿಯುಂಟೆ ಬಾ ನಿನಗೆನುತೆ
ಕೊಂಡಲ್ಲಿ ದಿವ್ಯಪ್ರಸೂನಮಂ ನಡೆತರುತೆ ।

ಆಹ ಭಾಗ್ಯವೆ ಶಿವನನೆಸೆದರ್ಚಿಸುವೊಳ್ ಪಡದೆ
ನಾಹ ಪುಣ್ಯವೆ ಶಿವನನಿವರ್ಚಿಸುವೊಳ್ ಪಡದೆ ।
ಎನುತಲ್ಲಿ ನಡೆಗೊಂಡು ಶಿವನ ಸಿಂಗರಕೆಂದು
ತನಿಗಂಪನೀವ ಪೊಸ ಪೂಗೊಳಕ್ಕೆಯ್ತಂದು ।
ಕಮಲವೇ ಹರಿಗೆ ಚಕ್ರವನಿತ್ತ ಶಿವನ ಪದ
ಕಮಲಕ್ಕೆ ಸಾರ್ವುದುಚಿತಂ ನಿನಗೆ ಪರಮಪದ ।
ವಿಂತೆಂದು ಹತ್ತೆಸಾರ್ದಂಬುಜಮನೆತ್ತುತುಂ
ಮುಂತೆ ಬಾಡಿದ ಕಮಲಮುಂ ಕೆಲಕೆ ಸಾರ್ಚುತುಂ ।
ನೆಯ್ದಿಲೆಯೆ ಶಿವನಲ್ಲಿಗೆಯ್ದಲೇಬಗೆದಪ್ಪೆ
ಒಯ್ವೊಡೇನಂ ಲಂಚವೀವೆ ನೀನಾಳ್ದಪ್ಪೆ ।
ಚೆಂಗಣಗಿಲೇ ಬಾರ ಲಿಂಗದೊಲವೇ ಎನುತೆ
ಸಿಂಗರಿಸುವೆಂ ಪರಮನಂಘ್ರಿಗಳನೆಂದೆನುತೆ ।
ಹಿಂಗದೆ ಕೊಳಂಗಳ ಜಲಂಗಳೊಳ್ ಪೋಗಿರ್ದು
ಮಂಗಳವೆನಿಪ್ಪ ಪೂವಂ ಕೊಂಡು ನಿಂದಿರ್ದು ।
ಎಸೆಯೆ ಪೊಱಮಟ್ಟು ಪರಿಮಳವುಳ್ಳ ಪೂಗಳಂ
ಪೆಸರಱಿಯದೇವೆನೋ ಕಂಪುಳ್ಳ ಪೂಗಳಂ ।
ಕಂಡಱಿಯದೇವೆನೋ ಪರಿಮಳಂ ಸಾಲ್ಗೆಂದು
ಕೊಂಡು ಪೊಸ ಪೂಗಳಂ ಶಿವನ ಸಿರಿಮುಡಿಗೆಂದು ।
  ಬಂದೊಂದು ನಿರ್ಮಳಸ್ಥಾನವಂ ನಡೆ ನೋಡಿ
ಇಂದುಧರ ಶರಣೆನುತೆ ಪರಮ ಹರುಷಂಗೂಡಿ ।

ನಳನಳಿಸುತುಂ ಬೆಳೆದ ಬಾಲಚೂತದ ಕೆಳಗೆ
ಹೊಳೆಹೊಳೆವ ಚಂದ್ರಕಾಂತದ ಶಿಲಾತಳದೊಳಗೆ ।
ಕದಳೀದಳಂಗಳಂ ಕಮಲಪತ್ರಂಗಳಂ
ಮುದದಿಂದೆ ಬಾಳೆಯೊಳ್ದಿರುಳ ಪುಳಕಂಗಳಂ ।
ಪೊಂಬಾಳೆಗಳ ಸುಳಿಯ ಸಪುರನೇತ್ರಂಗಳಂ
ಇಂಬಱಿದು ಪಾಸಿ ಪರಿಮಳಭಾಜನಂಗಳಂ ।
ಅಲ್ಲಲ್ಲಿ ಮೆಲ್ಲಮೆಲ್ಲನೆ ಪೂಗಳಂ ಸುರಿದು
ಸಲ್ಲಲಿತವೆನಿಪ ಸರಸಿಜಸೂತ್ರಮುಂ ಪಿಡಿದು ।
ಕೈಮುಟ್ಟಿ ಮುಟ್ಟದೆ ಮನಂ ಮುಟ್ಟಿ ಕಟ್ಟುತುಂ
ಕೈ ಮಱಿದು ಪೂ ಬೀಳೆ ಮಿಗೆ ಸತ್ತು ಹುಟ್ಟುತುಂ।
ನೋಡಿದೊಡೆ ಪೂ ಬಾಡುಗೆಂದು ಕಣ್ ಮುಚ್ಚುತುಂ
ನಾಡ ನೆನೆದೊಡೆ ಕುಂದುಗೆಂದು ಮನ ಬೆಚ್ಚುತುಂ ।
ನೋಡಿದೊಡೆ ಕೊಂಡಾಡುತುಂ ತೂಗಿ ತೊನೆವುತುಂ
ನೋಡುತ್ತೆ ಸಾಗಿಸುತ್ತೋವುತ್ತೆ ಮಲೆವುತುಂ ।
ನನೆಗಳಲರದ ಮುನ್ನೆ ಮನವಲರ್ದು ಪೊಂಗುತುಂ
ನನೆ ಬಿರಿವುದರ್ಕೆ ಚಿತ್ತಂ ಬೀಗಿ ಬಿರಿವುತುಂ ।
ಮೊಗ್ಗೆಯೊಳ್ ಶಿವನನಿರಿಸಲ್ ಬೇಡಿ ಬಯಸುತುಂ
ಹಿಗ್ಗಿದಲರ್ಗಳ ನಡುವೆ ಸಿಂಗರಿಸಲಾಡುತುಂ ।
ಇರಲಳಿಕುಳಂಗಳೆಲ್ಲಂ ತೋಂಟಮಂ ಪೊಕ್ಕು
ಪರಿದೊಕ್ಕಲಿಕ್ಕಿ ಪೂಗಾಡವೆ ಚಲಂ ಮಿಕ್ಕು ।

ಪರಿಮಳದ ಪಥವಿಡಿದು ಝೇಂಕರಿಸಿ ಬರುತುಮಿರೆ
ನೆರೆದು ಪಲ್ಮೊರೆವಂತೆ ಝೇಂಕರಿಸಿ ಬರುತುಮಿರೆ ।
ಬೇಡೆಲೆಲೆ ಹಂಪೆಯರಸನ ಕುಮಾರಂ ಸಿತಗ
ನಾಡಂಬರಂಗಳಂ ಕೊಳ್ಳನಾಱಿಡಿಗೆಱಗ ।
ಅಳಿಯಾಸೆ ಬೇಡ ನಿಮಗಿಲ್ಲಿ ಸೋಲುವರಿಲ್ಲ
ಗಳಗಳನೆ ಬಂದಂತೆ ಮರಳಿ ಗಳಗಳನೆಲ್ಲ ।
ಎನುತಮೊಂದೆರಡು ಸಂಪಗೆಯರಲ್ಗಳಿಂದಿಡಲ್
ತನತನಗೆ ಪೊರ್ದಲಣ್ಮದೆ ಪೋದವಳಲಿಡಲ್ ।
ಅಂತಲ್ಲಿ ಮಧುಕರಪ್ರಕರಮುಮನೆಬ್ಬಟ್ಟಿ
ಮುಂತಿರ್ದ ಪೊಸ ಪೂವನೋಪಿ ಕಱವಂ ಕಟ್ಟಿ । ೧೬೮

ಅಲ್ಲಿಂದೆ ತಳರ್ದು ಹರನರಮನೆಗೆ ಮುಂತಾಗಿ
ಮೆಲ್ಲನಲುಗದೆ ಪುಷ್ಪವೊಂದದಿರದಂತಾಗಿ ।
ಶಿವನರಮನೆಗೆ ಬಂದು ಬಾಗಿಲೊಳ್ ಸಾರ್ದಿರ್ದು
ಶಿವನುಪ್ಪವಡಿಸುವನ್ನೆವರಂ ಕೆಲಕೆ ಸಾರ್ದು ।
ಏನಯ್ಯ ಶಿವನೆ ಉಪ್ಪವಡಿಸಿರ್ದಾ ತಂದೆ
ಏನೆನ್ನ ಕೆಳುವಿರ್ದನೆನುತಲಿರ್ದಾ ತಂದೆ ।
ಅಳಿಗಳೆಱಗದ ಗಂಧವಹನಲುಗದಲರ್ಗಳಂ
ಎಳಸಿ ತಂದೆಂ ತಂದೆ ಪೊಚ್ಚಪೊಸ ಪೂಗಳಂ ।
ಎಂದು ಬಿನ್ನೈಸುತ್ತೆ ಹತ್ತೆಸಾರ್ದೊಲವಿಂದೆ
ತಂದ ಪೊಸ ಸೇವಂತಿಯಲರ ಪನಿನೀರಿಂದೆ । ೧೭೦

ಎಸೆವ ಮುಖಮಜ್ಜನಕ್ಕೆಱೆದು ಮಿಗೆ ಹಿಗ್ಗುತಂ
ಪೊಸ ಪರಾಗದ ವಿಭೂತಿಯ ತಿಲಕವಿಕ್ಕುತಂ ।
ಮಿಗೆ ಮೋಹದಿಂ ನೋಡಿ ಮನದೊಳಗೆ ತೂಪಿಱಿದು
ಮಘಮಘಿಪ ಕೇತಕಿಯ ನುಣ್ಣೆಸಳ್ಗಳಂ ಪಿಡಿದು ।
ಸಿರಿಮುಡಿಯನೊಯ್ಯನೆ ಸಡಿಲ್ಚಿ ನಯದಿಂ ಬಿಡಿಸಿ
ಪರಿಪರಿಯ ನೀಳ್ದ ಕೆಂಜಡೆಗಳಂ ನೆಲೆಗೊಳಿಸಿ ।
ಎಳೆಯ ಶಶಿಕಳೆ ನೋಯದಂತೆ ಮೆಲ್ಲನೆ ಹಿಕ್ಕಿ
ಹೊಳೆವ ಸುರನದಿ ತುಳ್ಕದಂತೆ ನಯದಿಂ ಹಿಕ್ಕಿ ।
ಪೊಸ ಪಡ್ವಳಿಯ ಪರಿಮಳದ ಕತ್ತುರಿಯನಿಕ್ಕಿ
ಸಸಿನಿಳಿವ ಜಡೆಗಳೊಳ್ ಪರಿಮಳವ ನುಣ್ಪಿಕ್ಕಿ ।
ಇರವಂತಿಯಂ ತಂದು ಸಿರಿಮುಡಿಯೊಳಗೆ ತುಱುಬಿ
ಬರಸಿಯುವಱೆಡಗೆಡಗೆ ಸೇವಂತಿಯಂ ತುಱುಬಿ ।
ಮಲ್ಲಿಗೆಯ ಪರಿಮಳದ ಚಂದನವನಣ್ಪಿಕ್ಕಿ
ಮೊಲ್ಲೆಯೊಳ್ಮುಗುಳ್ಗಳಿಂ ನಾಗಕುಂಡಲವಿಕ್ಕಿ ।
ಸಲ್ಲಲಿತ ಇರವಂತಿ ಕಂಠಮಾಲೆಯನಿಕ್ಕಿ
ಮೆಲ್ಲಿತಪ ದುಂಡುಮಲ್ಲಿಗೆಯ ಪದಕಮನಿಕ್ಕಿ ।
ಜಾದಿಯ ಸುಗಂಧದಿಂ ಮೃಗಮದವನೊಲ್ದಿತ್ತು
ಸಾದರಂ ಮಾಧವಿಯ ಮುದ್ರಿಕೆಯನೊಸೆದಿತ್ತು ।
ಮರುಗದೊಡ್ಡವಣೆಯಿಂ ಗಜಚರ್ಮಮಂ ಪೊದಿಸಿ
ನರೆದ ಸಂಪಗೆಗಳಿಂ ಪುಲಿದೊವಲನೊಲ್ದುಡಿಸಿ ।

ಸುರಹೊನ್ನೆಯಲರ್ಗಳಿಂದುರಗಕಂಕಣವಿಕ್ಕಿ
ಚರಣದೊಳು ಕಮಲಕರ್ಣಿಕೆಯ ಮುದ್ರಿಕೆಯಿಕ್ಕಿ ।
ಕಮಲಂಗಳಂ ಚರಣಕಮಲದೊಳ್ ಕೈಕೊಳಿಸಿ
ಕುಮುದಂಗಳಂ ಕೂಡೆ ಕೆಲದೊಳಂ ಕೈಕೊಳಿಸಿ ।
ಮಿಕ್ಕ ಪುಷ್ಪಂಗಳಂ ಮುಂದೆ ಪೂವಲಿಗೆದಱಿ
ಸೊಕ್ಕೇಱಿ ಹಾರೈಸಿ ಕರಣಂಗಳಂ ಸವಱಿ ।
ಝೋಂಪಿಸುವ ದವನದಿಂದೊಲ್ದು ಸೀಗುರಿಯಿಕ್ಕಿ
ಕಂಪೆಸೆವ ಮುಡಿವಾಳದಿಂದೆ ಚಾಮರವಿಕ್ಕಿ ।
ರಸಧೂಪಧೂಮದೊಡನೊಸೆದು ಆರತಿಯೆತ್ತಿ
ಪೊಸ ಪರಿಯ ಕಾಂತಿ ಮನದೊಳಗೆ ಬಳೆಯಲ್ ಮುತ್ತಿ ।
ಸವೆದ ದೇವಾನ್ನಮಂ ದಿವ್ಯಾನ್ನತತಿಗಳಂ
ಕ್ರಮದಿಂದಲಿತ್ತು ಕಡುಸವಿಯ ಸಂದಣಿಗಳಂ ।
ಇಂತು ನಲಿದಾರೊಗಿಸಲಿಕ್ಕಿ ತಾಂಬೂಲಮಂ
ಸಂತಸಂ ಮಿಗೆ ಕೊಟ್ಟು ಮುಖದ ಸುಖಜಾಲಮಂ ।
ಪೆಱಸಾರ್ದು ಕರುಣಪ್ರಸಾದಮಂ ಕೈಕೊಂಡು
ತೆಱಪಿಲ್ಲದುಗ್ಗಡದ ಶಿವಸುಖಮನೊಳಕೊಂಡು ।
ನೇಹದಿಂ ನೋಡುತುಂ ನಲ್ಮೆಯಿಂ ನೀಡುತುಂ
ಮೋಹದಿಂ ಬೇಡುತ್ತಮೆಯ್ದುಸದೆ ಬಾಡುತುಂ ।
ದೇವ ಸುಕುಮಾರ ಶಶಿಶೇಖರ ವಿರೂಪಾಕ್ಷ
ದೇವ ಪರಿವಾರವೃಂದಸೇವಿತ ವಿರೂಪಾಕ್ಷ ।

ಎಂದು ಪೊಗಳುತ್ತಮಾಡುತೆ ಹಿಗ್ಗಿ ಪೆರ್ಚುತುಂ
ನಿಂದು ನಲಿದಾಡಿ ಮಲೆದಾಡಿ ಮೈವೆರ್ಚುತುಂ ।
ಪೂಜೆಯಂ ನೋಡುತ್ತೆ ಪುಟವೇಳುತಾಡುತುಂ
ಓಜೆಯಂ ಮೀಱುತ್ತೆ ಕರುಣಮಂ ತೋಱುತುಂ ।
ಕಂಪಿಸುತೆ ಪುಳಕಿಸುತೆ ಹಳವಿಸುತೆ ಝುಳಪಿಸುತೆ
ಝೋಂಪಿಸುತೆ ಜೋಲುತ್ತವಮರುತ್ತೆ ಬೆಮರುತ್ತೆ ।
ಕೂನರುತ್ತೆ ಕೊರ್ಬುತ್ತೆ ಪುಳಕಿಸುತೆ ತೊನೆವುತ್ತೆ
ಮುನಿವುತ್ತೆ ತೊನೆವುತ್ತೆ ತೂಗುತ್ತೆ ಮುದ್ದಿಸುತೆ ।
ಗರ್ಬಿಸುತೆ ಗಳಪುತ್ತೆ ಕೆಲಬಲನನೇಡಿಸುತೆ
ಪರ್ಬಿ ಪಲ್ಲವಿಪ ಭಕ್ತಿಗೆ ಮನಮನೆಡೆಗುಡುತೆ ।
ಭಕ್ತಿಸುಖದಿಂದಿತರಸುಖವದೆಲ್ಲಿಯದೆನಿಸಿ
ಮುಕ್ತಿಸುಖದಿಂದಧಿಕವಿದಕೆ ಪಡಿಯಿಲ್ಲೆನಿಸಿ ।
ಪರುಷವಂ ಬಿಸುಡೆಂದು ಸುರಭಿಯಂ ತೆಗೆಯೆಂದು
ಸುರತರುವನೊಲ್ಲೆನೆಂದಮೃತವಂ ಚೆಲ್ಲೆಂದು ।
ನಿಧಿಗಳಂ ನೂಂಕು ಚಿಂತಾಮಣಿಯನಿಕ್ಕೆಂದು
ಮಧುಗಿಧುಗಳೆಲ್ಲಿಯುವವೇತಱವವೇಕೆಂದು ।
ಉರವಣಿಪ ಪರಮಭಕ್ತಿಯ ಸುಖದ ಸೊಕ್ಕೇಱೆ
ಹರ ನಿಮ್ಮ ಮೂರ್ತಿ ಕರಣಂಗಳ್ ಕಾಲೂಱೆ ।
ಹರ ಹರ ನಮಶ್ಶಿವಾಯೆಂಬ ಕಳವಳವೇಱೆ
ಪರಮಪದದಾನಂದಸುಖದ ಸುಧೆ ತಲೆಗೇಱೆ ।

ಶೀವಿ ಗದ್ಗದಮುಣ್ಮಿ ಪೊಣ್ಮಿ ಕರಗುತೆ ಬರುತೆ
ವೀವೀವಿರೂರೂರುಪಾಪಾಕ್ಷಕ್ಷಯೆನುತ್ತೆ ।
ಒಸೆದು ಮೊದಲನೆಯಕ್ಕರದೊಳೆ ಹರುಷಂ ಮೂಡಿ
ಮಿಸುಗುವೆರಡನೆಯಕ್ಕರದೊಳೆ ಸುಖವಕ್ಕಾಡಿ ।
ಮೂಱನೆಯ ವರ್ಣದೊಳ್ ಮಱೆದು ಪುಳಕಂ ನೆಗೆದು
ಮೀಱೆ ನಾಲ್ಕನೆಯಕ್ಕರದೊಳೆ ಮುನ್ನಿನಪಳಿದು ।
ಏನೆಂಬೆನಚ್ಚ ಶಿವಭಕ್ತಿ ಪೆರ್ಚಲ್ ಕರಂ
ಆನಂದರಸದಿಂದೆ ತೋದು ನಾಲ್ಕಕ್ಕರಂ ।
ನಾಲಗೆಯ ಮೇಲೆ ಹೊರಳುತ್ತೆ ಸಡಿಲುತ್ತಮಿರೆ
ಲೀಲೆಯಿಂದಶ್ರು ನಯನದೊಳೆ ತೆರೆಮುಸಗುತಿರೆ ।
ಮುತ್ತಿದರಿಷಡ್ವರ್ಗವತ್ತ ಸಾರುತ್ತಮಿರೆ
ಹತ್ತಿರ್ದ ತಾಪತ್ರಯಂ ಕಣ್ಣನಾಗುತಿರೆ ।
ಮನವು ನಿಮ್ಮಡಿಗೆಱಗಿ ಬುದ್ಧಿ ನೆಱೆ ತರ್ಕೈಸಿ
ನೆನಹು ನಿಮ್ಮೊಳ್ ಪುಗಲ್ ಚಿತ್ತವೆರವಿಲ್ಲೆನಿಸಿ ।
ನಿನ್ನ ನಿಜವೆನ್ನ ಜೀವವನಿಂಬುಗೊಂಡಿರಲ್
ನಿನ್ನ ಸುಕೀರ್ತಿಯೆನ್ನ ಚಿತ್ತವನಿಂಬುಗೊಂಡಿರಲ್ ।
ನಿನ್ನ ರೂಪೆನ್ನ ಕಣ್ಗಳನಿಂಬುಗೊಂಡಿರಲ್
ನಿನ್ನ ಸರ್ವಾಂಗವೆನ್ನಂಗದೊಳ್ ತೀವಿರಲ್ ।
ಇಂತು ನೀನೆನ್ನನೊಚ್ಚತವಾಗಿ ಕೈಕೊಂಡು
ಸಂತಸದೊಳಾಂ ನಿನ್ನನಗಲದೆ ಮನಂಗೊಂಡು ।

ಅರ್ಚಿಸುತ್ತಿರ್ಪುದಂ ಕರುಣಿಸುವುದೆಲೆ ದೇವ
ನಚ್ಚಿ ನಲಿದಿರ್ಪುದಂ ಕರುಣಿಸುವುದೆಲೆ ದೇವ ।
ಮಚ್ಚಿ ಮಱೆದಿರ್ಪುದಂ ಕರುಣಿಸುವುದೆಲೆ ದೇವ
ಹೆಚ್ಚಿ ಹಿಗ್ಗಿರ್ಪುದಂ ಕರುಣಿಸುವುದೆಲೆ ದೇವ ।
  ದೇವ ಕರುಣಿಗಳರಸ ದೇವ ದಾನಿಗಳರಸ
ದೇವ ಮಾನಿಗಳರಸ ದೇವ ಬೋಳೆಯರರಸ ।
ಹೆಂಪಿಡಿದಮರವೃಕ್ಷ ಹಂಪೆಯ ವಿರೂಪಾಕ್ಷ
ಬೇಡುವೆನಿದಂ ದೇವ ಮಾಡುವುದಿದಂ ದೇವ ।
ಶಿಶುವೆಂದು ನೋಡುವುದು ಪಶುವೆಂದು ಕೂಡುವುದು
ವಿಷಯದಿಂ ನೊಂದಪೆಂ ಪಸಿವಿನಿಂ ಬೆಂದಪೆಂ ।
ಕಾಮದೊಳ್ ಕಂದಿದೆಂ ತಾಮಸದೊಳೊಂದಿದೆಂ
ಮೋಹದಿಂ ಮುಗ್ಗಿದೆಂ ದೇಹದಿಂ ತಗ್ಗಿದೆಂ ।
ಏವೆಂ ಮಹಾದೇವ ಕಾವುದು ಮಹಾದೇವ
ಆರುಂಟೆನಗೆ ದೇವ ಆರನರ್ಚಿಪೆ ದೇವ ।
ಎನಗೆ ಹೊನ್ನುಂ ನೀನೆ ಎನಗೆ ಚೆನ್ನುಂ ನೀನೆ
ಎನಗೆ ಕುಲವುಂ ನೀನೆ ಎನಗೆ ಒಲವುಂ ನೀನೆ ।
ಎನಗೆ ಬಲುಹುಂ ನೀನೆ ಎನಗೆ ಮೆಲುಹುಂ ನೀನೆ
ಎನಗೆ ಗರ್ವಂ ನೀನೆ ಎನಗೆ ಸರ್ವಂ ನೀನೆ ।
ನಿನ್ನನರ್ಚಿಸಲಿತ್ತು ಚೆನ್ನ ಭಕ್ತಿಯನಿತ್ತು
ಕರುಣಿಸು ವಿರೂಪಾಕ್ಷ ಪರಿಕಿಸು ವಿರೂಪಾಕ್ಷ ।

ರಕ್ಷಿಸು ವಿರೂಪಾಕ್ಷ ವೀಕ್ಷಿಸು ವಿರೂಪಾಕ್ಷ
ದಯೆಗೆಯ್ ವಿರೂಪಾಕ್ಷ ಜಯಜಯ ವಿರೂಪಾಕ್ಷ ॥

ಅಕ್ಷಮನಳಿಪಂ ಮಾಯಾ
ಪಕ್ಷನೆಯಾಂ ನಿನ್ನನೊಲ್ದು ಪೊರ್ದಿದೆನಭವಾ
ರಕ್ಷಿಸು ರಕ್ಷಿಸು ರಕ್ಷಿಸು
ರಕ್ಷಿಸು ಹೋ ದೇವ ಹಂಪೆಯ ವಿರೂಪಾಕ್ಷ ॥

೩

# ರಾಘವಾಂಕ : 'ಚಂದ್ರಮತಿಯ ಪ್ರಲಾಪ'

ಇಂತು ನೃಪನಿತ್ತ ದಿವಸಂ ಕಳೆಯುತಿರಲತ್ತ
ಲಂತವರನೊತ್ತಿಟ್ಟ ಮನೆಯನೇವೊಗಳ್ವೆನದು
ತಿಂತಿಣಿಯ ಸೂನೆಗಾಜಿರ ನಿಳಯ ರಕ್ಕಸಿಯ
ಮಾಡ ಹಾವಿನ ಹೇಳಿಗೆ
ಅಂತಕನ ನಗರ ಮೃತ್ಯುವಿನ ಬಲುಬಾಣಸದ
ಹಂತಿ ಮಾಸಿಯ ಮೂರಿಯಾಟದೆಡೆಯೆಂಬಾಗ
ಳೆಂತು ಜೀವಿಪರಕಟ ಮನೆಯವರ ದುರ್ಧರದೊ
ಳವನಿಪನ ಸತಿಪುತ್ರರು ॥ ೧

ಒಡೆಯನತಿಕೋಪಿ ಹೆಂಡತಿ ಮಹಾಮೂರ್ಖೆ ಮಗ
ಕಡುಧೂರ್ತ ಸೊಸೆಯಾದಡಧಿಕನಿಷ್ಠುರೆ ಮನೆಯ
ನಡೆವವರು ದುರ್ಜನರು ನೆರೆಮನೆಯವರು ಮಿಥ್ಯ
ವಾದಿಗಳು ಪಶುಗಳಗಡು
ಅಡಿಗಡಿಗೆ ಕೋಪಿಸುವ ಸಾಯೆ ಸದೆಬಡಿವ ಕಾ
ಳ್ಗೆಡೆವ ಕರಕರಿಪ ಸೆಣಸುವ ತಪ್ಪ ಸಾಧಿಸುವ
ಕೆಡೆಯೊದೆವ ಮಾರಿಗಾಜಿದೆ ಸತ್ತು ಹುಟ್ಟುತಿಹ
ರವನಿಪನ ಸತಿಪುತ್ರರು ॥ ೨

ಎಡೆವಿಡದೆ ಹಲವು ಸೂಳೊಡೆಯನರಮನಗೆ ನೀ
ರಡಕಿ ಕೊಟ್ಟನಿತು ಬತ್ತವ ಮಿದಿದು ಒಡಲಿಗೆ
ಯ್ದಡೆಯಿಕ್ಕಿದನಿತುಮನೆ ಉಂಡು ಇರುಳುಂ ಹಗಲು
ಮೆನ್ನದೋರಂತೆ ಕಾದಿವ
ಮಡದಿಯ ಕುಮಾರನುದಯದೊಳೆದ್ದು ಹೋಗಿ ಹೇ
ರಡವಿಯಲಿ ಹುಲುಹುಳ್ಳಿಯಂ ಕೊಂಡು ನಿಚ್ಚ ತ
ನ್ನೊಡನಾಡಿಗಳ್ವೆರಸಿ ಬೈಗೆ ಬಂದಿತ್ತು ಕಾ
ಲವನು ಸವೆಯಿಸುತಿರ್ದನು ॥ ೩

ಓರಂತೆ ತಲ್ಲಣಿಸಿ ಹೆದಱಿ ಕಣ್ಗೆಟ್ಟೋಡ
ಬಾರದಿರಬಾರದುಱಿ ಸಾಯಬಾರದು ಬದುಕ
ಬಾರದೆಂಬಂತೆ ತನ್ನೊಡಲಿಂಗೆ ಒಪ್ಪ ದುಃಖಂ
ಗಳಿಗೆ ಸಾಕ್ಷಿಯಾಗಿ
ಧಾರಿಣಿಯೊಳವನಿಪನ ಸತ್ಯ ಸಲಬೇಹುದೆಂ
ಬಾರಯ್ಕೆವಿಡಿದು ನಡೆಯುತ್ತಿಪ್ಪ ನಾರಿಯ ಕು
ಮಾರಂಗೆ ಬಂದ ಸಂಕಟದ ಸಂವರಣೆಯನ
ದಾವ ಜೀವರು ಕೇಳ್ವರು ॥ ೪

ಎಂದಿನಂತುದಯಕಾಲದೊಳೆದ್ದು ಹುಲುಹುಳ್ಳಿ
ಗೆಂದರಣ್ಯಕ್ಕೆ ನಡೆದಲ್ಲಲ್ಲಿ ಹೋಗಿ ಹಲ
ವಂದದಡುಗಬ್ಬನಾಯ್ದೊಟ್ಟಿ ಹೊಱೆಗಟ್ಟಿ ಹೊ
ತ್ತೋರಗೆಯ ಮಕ್ಕಳೊಡನೆ
ನಿಂದು ಮಧ್ಯಾಹ್ನದುರಿಬಿಸಿಲೊಳೆದ ಬಿರಿಯೆ ಜವ
ಗುಂದಿ ತಲೆ ಕಾಸಿದು ನಡೆಗೆಟ್ಟು ಬಾಯ್ವಾಱಿ ಹಣೆ
ಯಿಂದ ಬೆಮರುಗೆ ನೆತ್ತಿ ಹೊತ್ತಿ ಕೇಂಕಾಕ್ತ ಹರಿ
ತಪ್ಪಾಗಳೇವೊಗಳ್ವೆನು ॥ ೫

ಕೆಲದ ಮೆಳೆಯೊತ್ತಿನೊಳಗಿರ್ದ ಹುತ್ತಿನೊಳು ನಳ
ನಳಿಸಿ ಕೋಮಲತೆಯಿಂ ಕೊಬ್ಬಿ ಕೊನೆವಾಯ್ದು ಕಂ
ಗಳವಟ್ಟು ಬೆಳೆದೆಳೆಯ ದರ್ಭೆಯಂ ಕಂಡು ಹಾ
ರಯಿಸಿ ನಾನಿದನೆಲ್ಲವ
ಗಳಗಳನೆ ಕೊಯ್ದು ಕೊಂಡೊಯ್ದಿತ್ತಡೆನ್ನೊಡೆಯ
ಮುಳಿಯದಿಹನೆಂಬಾಸೆಯಿಂ ಹೊಱೆಯನಿಳುಹಿ ಮು
ತ್ತಿಳಸಿ' ಕುಡುಗೋಲ್ವಿಡಿದು ಸಾರ್ದನಸ್ತಾದ್ರಿಯಂ
ಸಾರ್ದ ಮಾರ್ತಾಂಡನಂತೆ ॥ ೬

ಹೊದೆಗಡಿದು ಹತ್ತಿ ಹುತ್ತನು ಸುತ್ತಿದೆಳಹುಲ್ಲ
ಹೊದಱ ಹಿಡಿದಡಸಿ ಬಿಡದರಿದು ಸೆಳೆಯಲ್ ಕೈಯ
ಹದರನೊಡೆಗಚ್ಚಿ ಜಡಿಯುತ್ತ ಭೋಂಕನೆ ಬಂದ
ರೌದ್ರಸರ್ಪನನು ಕಂಡು
ಹೆದಱಿ ಹವ್ವನೆ ಹಾಱಿ ಹಾ ಎಂದು ಕೈಕಾಲ
ಕೆದಱಿ ತಲೆಕೆಳಗಾಗಿ ಕೆಡೆದನಕಟಕಟ ಮುದ
ಮುದಿತರಾಹುಗ್ರಸ್ತವಾದ ತರುಣೇಂದುಬಿಂ
ಬಂ ನೆಲಕೆ ಬೀಳ್ವಂದದೆ ॥ ೭

ಹುತ್ತಿನಿಂ ಫಣಿವೆರಸಿ ಕೆಡೆಯೆ ಕಂಡೊಡನಿರ್ದ
ತತ್ತುಕಂಗಳು ಹೆದಱಿ ಬಿಟ್ಟೋಡಿಹೋದರೂ
ರತ್ತಲಿತ್ತಂ ತಾಯ್ಗೆ ಹಲುಬಿ ತಂದೆಯ ಕರೆದು
ದೆಸೆದೆಸೆಗೆ ಬಾಯ ಬಿಟ್ಟು
ನೆತ್ತಿಗೇಱಿದ ವಿಷದ ಕೈಯಿಂದ ಮಡಿದನೀ
ಹೊತ್ತೆನ್ನ ಕುಲದ ಕುಡಿ ಮುರುಟಿತೆಂದುಮ್ಮಳಂ
ಚೆತ್ತು ಬೀಳವೆ ಮಾಣನೆಂಬಂತೆ ರವಿ ಬಿದ್ದ
ನಂದು ಪಡುವಣ ಕಡಲೊಳು ॥ ೮

ತನಯನೆಂದುಂ ಬಪ್ಪ ಹೊತ್ತಿಂಗೆ ಬಾರದಿರೆ
ಮನನೊಂದಿದೇಕೆ ತಳುವಿದನೆನ್ನ ಕಂದನೆಂ
ದೆನುತ ಸುಯ್ಯುತ್ತ ಮಱುಗುತ್ತ ಬಸುಱಿಂ ಹೊಸೆದು
ಕೊನೆವೆರಳ ಮುಱಿದುಕೊಳುತ
ತನುವ ಮಱೆದಡಿಗಡಿಗೆ ಹೊಱಗನಾಲಿಸಿ ಮತ್ತೆ
ಮನೆಯೊಡತಿಗಂಜಿ ಕೆಲಸವನು ಮಾಡುತ್ತಿಪ್ಪ
ವನಿತೆಗಾದಾಪತ್ತನಾಲಿಸದೆ ಕೆಟ್ಟು ದ
ಟ್ಟಿಸುವರದನೇನೆಂಬೆನು ॥ ೯

ಅಡವಿಯೊಳು ಹೊಲಬುಗೆಟ್ಟನೊ ಗಿಡುವಿನೊಳಗೆ ಹುಲಿ
ಹಿಡಿದುದೋ ಕಳ್ಳರೊಯ್ದರೊ ಭೂತಸಂಕುಲಂ
ಹೊಡೆದುವೋ ನೀರೊಳದ್ದನೊ ಮರದ ಕೊಂಬೇಱಿ
ಬಿದ್ದನೋ ಫಣಿ ತಿಂದುದೋ
ಕಡುಹಸಿದು ನಡೆಗೆಟ್ಟು ನಿಂದನೋ ಎಂದಿಂತು
ಮಡದಿ ಹಲವಂ ಹಲುಬುತಂಗಣದೊಳಿರೆ ಹೊತ್ತು
ಹೊಡಕರಿಸಿದಳಲ ಕರ್ಬೊಗೆಯಂತೆ ಕವಿವ ಕ
ತ್ತಲೆಯೊಳಗೆ ನಿಂದಿರ್ದಳು ॥ ೧೦

ಬಂದರಂ ಲೋಹಿತಾಶ್ವಾ ಎಂದು ಬಟ್ಟೆಯೊಳು
ನಿಂದರಂ ಲೋಹಿತಾಶ್ವಾ ಎಂದು ಗಾಳಿ ಗಿಱಿ
ಕೆಂದಡಂ ಲೋಹಿತಾಶ್ವಾ ಎಂದು ಕರೆಕರೆದು
ಬಿಡೆ ಬೀದಿಗಱುವಿನಂತೆ
ಮಂದಮತಿಯಾಗಿರ್ದ ಚಂದ್ರಮತಿಗೊಬ್ಬನೆ
ಯ್ತಂದಿಂದು ಕೂಡೆ ಹೋಗಿರ್ದು ಕಂಡೆಂ ನಿನ್ನ
ಕಂದನೊಂದುಗ್ರಫಣಿ ತಿಂದು ಜೀವಂಗಳೆದ
ನೆಂದು ಹೇಳಿದನಾಗಳು ॥ ೧೧

ಏಕೆ ಕಚ್ಚಿತ್ತಾವ ಕಡೆಯಾವ ಹೊಲನಕ್ಕ
ಟಾ ಕುಮಾರಂ ಮಡಿದ ರಾವೆನಿತು ದೂರವೆನ
ಲೀ ಕಡೆಯೊಳೀ ಹೊಲದೊಳೀ ಮರದ ಕೆಲದ ಹು
ತ್ತಿನ ಹುಲ್ಲ ಕೊಯ್ಯೆ ಕೈಯ
ನೂಕಿ ಫಣಿಯುಗಿಯೆ ಕೆಡೆದಂ ದೂರವಲ್ಲಲ್ಲ
ಬೇಕಾದಡೀಗ ಹೋಗಲ್ಲದಿರ್ದಡೆ ಬಳಿಕ
ನೇಕ ಭಲ್ಲುಕ ಜಂಬುಕಂ ಘೂಕ ವೃಕಗಳೆಳೆ
ಯದೆ ಬಿಡವು ಕೇಳೆಂದನು ॥ ೧೨

ನುಡಿಯಲರಿದೆನಿಸಿ ಮೇರೆಯ ಮೀಱುವಳಲನಳ
ವಡಿಸಿ ಬಂದೊಡೆಯನಡಿಗಳ ಮೇಲೆ ಕೆಡೆದು ಬಾ
ಯ್ವಿಡುತರಣ್ಯದೊಳೆನ್ನ ಮಗನುಗ್ರಕಾಳೋರ
ಗಂ ಕಚ್ಚಿ ಮಡಿದನೆಂದು
ನುಡಿಯೆ ಲೇಸಾಯ್ತು ಮಡಿದರೆ ಮಡಿದನೆಂದು ಕಿಡಿ
ನುಡಿಯೆ ಬಂಟರನು ಕೊಟ್ಟಟ್ಟಿಸಿಸ್ಯೆ ತಂದೆ ಎನೆ
ನಡುವಿರುಳು ಬಂಟರುಂಟೇ ನಿದ್ದೆಗೆಯ್ಯಬೇ
ಕೇಳು ಕಾಡದಿರೆಂದನು ॥ ೧೩

ನರಿಗಳೆಳೆಯದ ಮುನ್ನ ದಹಿಸಬೇಡವೆ ತಂದೆ
ಕರುಣಿಸೆನೆ ದುರ್ಮರಣವಟ್ಟ ಶೂದ್ರನನು ಸಂ
ಸ್ಕರಿಸುವವರಾವಲ್ಲವೆಂದೆನಲ್ಯಾನಾದ
ಡಂ ಹೋಗಿ ಕಂಡು ಮಗನ
ಉರಿಗಿತ್ತು ಬಪ್ಪೆನೇ ಎನೆ ಕೆಲಸಮುಂ ಬಿಟ್ಟು
ಹರಿಯದಿರ್ದಡನೆಯ್ದಿ ಗೆಯ್ದು ಹೋಗೆನಲು ಚ
ಚ್ಚರದಿ ಮಾಡುವ ಕಜ್ಜವೆಲ್ಲವಂ ಮಾಡಿ ಹೊಱ
ವಂಟಳೊಯ್ಯನೆ ಮನೆಯನು ॥ ೧೪

ದಟ್ಟೈಸಿ ಮಡಲಿಱಿವ ಕಾಳದೊಳು ನಸುವಿರುಳು
ನಟ್ಟ ಮುಳ್ಳುಗಳನೆಡಹಿದ ಕಲ್ಲ ಹಾಯ್ದ ಮರ
ಮುಟ್ಟನೇಱಿದ ದಡನನಿಳಿದ ಕುಳಿಯಂ ಬಿದ್ದ
ದರಿಗಳಂ ಹಿಡಿದ ಗಿಡುವ
ಬಿಟ್ಟ ತಲೆಯಂ ಬಿಚ್ಚಿದುಡಿಗೆಯಂ ಮಱೆದು ಗೋ
ಳಿಟ್ಟು ಬಾಯ್ವಿಟ್ಟು ಮೊಱೆಯಿಡುತ ನಡೆತಂದು ಹುಲು
ವಟ್ಟೆಯೊಳು ಬೆಳೆದ ಪೆಮ್ಮರನ ಮಲಗಿಸಿ ನಿಂದ
ಹುಳ್ಳಿಹೊಱೆಯಂ ಕಂಡಳು ॥ ೧೫

ಈಯೆಡೆಯೊಳಿನ್ನಿರದೆ ಮಾಣನೆನುತಂ ಬಂದು
ತಾಯಿ ಕರೆದಳು ಮಗನೆ ಮಗನೇ ಹರಿಶ್ಚಂದ್ರ
ರಾಯನ ಕುಮಾರ ಪೇಳಾವ ರಾವೊಳಕೊಂಡು
ದಯ್ಯ ನೀನೆಲ್ಲಿರ್ದಪೆ
ಓಯೆಂಬುದೇನು ಕಂದಾ ಬಾಯ ಬಿಡದಿತ್ತ
ಬಾಯೆಂಬುದೇನು ತಂದೇ ಎನ್ನನೊಲ್ಲದಡೆ
ಸಾಯೆಂಬುದೇನುಸುರದಿರಲೇಕೆ ತರುಣ ಎಂ
ದೊಱಲಿದಳು ಹಂಬಲಿಸುತ ॥ ೧೬

ವಿಷದ ಪೊಗೆ ಹೊಯ್ದು ಹಸುರಾದ ಮೈ ಮೀಱಿ ನೊರೆ
ಯೊಸರ್ವ ಗಲ್ಲಂ ಕಂದಿದುಗುರ್ಗಳರೆದೆಱೆದಗು
ರ್ವಿಸುವ ಕಣ್ ಹಱಿದು ಹುಲುಹಿಡಿದ ಹರಹಿದ ಕೈಗ
ಳಂಬ ಪೊತ್ತುಱಹಡೆಯದೆ
ಪಸಿದು ಬೆಂಗಡರ್ದ ಬಸುಱಿಕಟಕಟ ಮುರಿದ ಗೋಣ್
ದೆಸೆಗುರುಳ್ದ ಹುಡಿ ಹೊಕ್ಕ ಬಱಿತ ಬಾಯ್ವೆರಸಂದು
ಒಸವಳಿದ ನಿಜಸುತನ ಕಂಡಳು ಹರಿಶ್ಚಂದ್ರ
ನರಸಿ ಹುತ್ತಿನ ಮೊದಲೊಳು ॥ ೧೭

ಹಡೆದೊಡಲು ಹುಡಿಯಾಯ್ತು ಮಗನೆ ಮಗನುಂಟೆಂದು
ಕಡಗಿ ಹೆಚ್ಚುವ ಮನಂ ಹೊತ್ತಿ ಹೊಗೆಯಿತ್ತು ಬಿಡ
ದಡರಿ ನಿಟ್ಟಿಸಿ ನಲಿವ ದಿಟ್ಟಿ ಕೆಟ್ಟುವು ಸೋಂಕಿ
ಪುಳಕಿಸುವ ಕರಣಂಗಳು
ಕಡಿವಡೆದುವೊಸೆದು ಹೆಸಗೊರ್ಳುತಿಪ್ಪ ನಾಲಗೆಯ
ಕುಡಿ ಮುರುಟಿತೊಮ್ಮೊಮ್ಮೆ ನುಡಿಯನಾಲಿಪ ಕಿವಿಯ
ಹಡಿಗೆತ್ತುದೆಲೆ ಕಂದ ಎಂದೆನುತ್ತಿಂದುಮುಖಿ
ಮಱುಗಿ ಬಾಯ್ಬಿಟ್ಟಳೆಂದು ॥ ೧೮

ಸಿರಿ ಹೋದ ಮಱುಕವನು ನೆಲೆಗೆಟ್ಟ ಚಿಂತೆಯನು
ಪರದೇಶಮಂ ಹೊಕ್ಕ ನಾಚಿಕೆಯನಱಿಯದ
ನ್ಯರ ಮನೆಯ ತೊತ್ತಾದ ಭಂಗವನು ನಿಮ್ಮಯ್ಯ
ಗಜ್ಞಾತವಾದಳಲನು
ನೆರೆದು ಮನೆಯವರೆಯ್ದೆ ಕರಕರಿಪ ದುಃಖವನು
ತರಳ ನಿನ್ನಂ ನೋಡಿ ಮಱೆದು ಪರಿಣಾಮವಂ
ಧರಿಸುತಿಪ್ಪೆನ್ನ ಗೋಣಂ ಕೊಯ್ದು ಇನ್ನಾರ
ನೋಡಿ ಮಱೆದಪೆನೆಂದಳು ॥ ೧೯

ಅತಿಲಜ್ಜೆಗೆಟ್ಟನ್ಯರಾಳಾಗಿ ದುಡಿದು ಧಾ
ವತಿಗೊಂಡು ಧನವನಾರ್ಜಿಸಿ ಹರಿಶ್ಚಂದ್ರಭೂ
ಪತಿ ನಮ್ಮ ಬಿಡಿಸುವಾರ್ತದ ಮೋಹದಿಂ ಹಸಿವು
ನಿದ್ದೆಯಂ ತೊಱೆದು ಬಂದು
ಸುತನ ಕರೆಯೆಂದಡೇನೆಂಬೆನಾವುದ ತೋಱಿ
ಪತಿಯ ಮಱುಕವನು ಮಱೆಯಿಸುವೆನುಗ್ರಾಹಿಗಾ
ಹುತಿಯಾದನೆಂದು ಪೇಳ್ವೆನೆ ಎನ್ನ ಕಂದ ಎಂ
ದಂದುಮುಖಿ ಬಾಯ್ಬಿಟ್ಟಳು ॥ ೨೦

ಇನ್ನಿನಿತಱಿಂದ ಮೇಲೆನ್ನೊಡೆಯನಱಿಸಿ ಬಂ
ದೆನ್ನನೊಯ್ವಡೆ ಬಳಿಕ ಸುಡಹಡೆಯನೆಂಬುದನು
ತನ್ನಲ್ಲಿ ತಾನೆ ತಿಳಿದೆದ್ದು ಪುತ್ರನ ಶವವ
ಹೊತ್ತು ದೆಸೆದೆಸೆಗೆ ತಿರುಗಿ
ಮುನ್ನೆಲ್ಲರಂ ಸುಡುವ ಠಾವಾವುದೆಂದು ನೋ
ಳ್ಪನ್ನೆಗಂ ಹಲವುಕೆಲವುರಿಯ ಬೆಳಗಂ ಕಂಡು
ನನ್ನಿಕಾಱಿಂ ಕಾವ ಕಾಡತ್ತ ನಡೆವಾಗ
ಬಟ್ಟೆಯೊಳದೇವೊಗಳ್ವಿನು ॥ ೨೧

ಕೆಡೆದ ಮುಂಡದ ಬಿದ್ದ ತಲೆಯ ಚೆಲ್ಲಿದ ಕರುಳ
ಪಡಲಿಟ್ಟ ಕಾಳಿಜದ ಮಿದುಳ ಕೋಳ್ಗಿಸಱಿ ಹೊನ
ಲಿಡುವ ರಕುತದ ಕಡಲೊಳಡಿಯಿಡಲು ಬಾರದೆಂ
ಬಂತೆ ವಿಶ್ವಾಮಿತ್ರನು
ಅಡವಿಯೊಳಗೆಯ್ದೆ ನಾನಾಭಯಂಕರವ ಸಾ
ಲಿಡಲದನು ಪುತ್ರಶೋಕಗ್ರಹಾವಿಷ್ಟತೆಯ
ಕಡುಪಿನಿಂ ಲೆಕ್ಕಿಸದೆ ಬಂದು ಸುಡುಗಾಡೊಳಿಳು
ಹಿದಳು ತನಯನ ಶವವನು ॥ ೨೨

ಗಳಗಳನೆ ಮುನ್ನ ಬೆಂದುಳಿದಿರ್ದ ಕೆಂಗೊಳ್ಳಿ
ಗಳನೆಲ್ಲವಂ ಸಿದುಗಿ ತಂದೊಟ್ಟಿ ಮೇಲೆ ಮಂ
ಗಳಮಯ ಕುಮಾರನಂ ಪಟ್ಟಿರಿಸಿ ಕೆಲದೊಳುರಿ
ವಗ್ನಿಯಂ ಪಿಡಿದು ನಿಂದು
ಬೆಳೆದಲ್ಲಿ ಬೆಳೆ ಹುಟ್ಟಿದಲ್ಲಿ ಹುಟ್ಟೆಂದು ನುಡಿ
ದಳುಹಲನುಗೆಯ್ದುಳುಹಲಾಱದಳವಳಿದು ಬಾ
ಯಳಿದು ಮೊಱೆಯಿಟ್ಟಡಾ ದನಿಗೇಳ್ದು ನಿದ್ರೆ ತಿಳಿ
ದೆದ್ದು ಬಂದನು ಭೂಪನು ॥ ೨೩

ನಟ್ಟಿರುಳು ಸುಡುಗಾಡೊಳೊಬ್ಬಳೋರಂತೆ ಬಾ
ಯ್ವಿಟ್ಟು ಹಲುಬುವ ವೀರನಾರಿಯಾವಳೊ ಮೀಱಿ
ಸುಟ್ಟಿಯಾದಡೆ ನಿನಗೆ ವೀರಬಾಹುಕನಾಣೆ
ಕದ್ದು ಸುಡಬಂದೆ ನಿನ್ನ
ನಿಟ್ಟಿಲುವ ಮುಱಿವೆನೆಂದುರವಣಿಸಿ ಜಱಿಯುತ್ತ
ದಟ್ಟಿಸುತ ಬಂದು ಹಿಡಿದಿರ್ದ ಕಿಚ್ಚಂ ಕೆದಱಿ
ಮುಟ್ಟಿಗೆಯ ಮೇಲಿರ್ದ ಸುತನ ಹಿಂಗಾಲ್ವಿಡಿದು
ಸೆಳೆದು ಬಿಸುಟಂ ಭೂಪನು ॥ ೨೪

ಬಿಸುಡದಿರು ಬಿಸುಡದಿರು ಬೇಡ ಬೇಡಕಟಕಟ
ಹಸುಳ ನೊಂದಹನೆಂದು ಬೀಳ್ವವನನೆತ್ತಿ ತ
ಕ್ಕಿಸಿಕೊಂಡು ಕುಲವ ನೋಡದೆ ಬೇಡಿಕೊಂಬೆನಿವ
ನೆನ್ನ ಮಗನಲ್ಲ ನಿನ್ನ
ಸಿಸುವಿನೋವಾದಿ ಸುತಲನುಮತವನಿತ್ತು ರ
ಕ್ಷಿಸು ಕರುಣಿಯೆಂದಡೆಲೆ ಮರುಳೆ ಹೆಣನುಟ್ಟುದಂ
ಮಸಣವಾಡಗೆಯ ಹಾಗವನು ಕೊಟ್ಟಲ್ಲದೇ
ನೆಂದಡಂ ಬಿಡೆನೆಂದನು ॥ ೨೫

ಕೊಡಲೇನುವಿಲ್ಲವೆಂದೆನಗೆ ಲೋಗರ ಮನೆಯು
ಬಡದಾಸಿ ಕರುಣಿಸೆನೆ ನಿನ್ನ ಕೊರಳಿನೊಳಿರ್ದ
ಕಡುಚೆಲುವ ತಾಳಿಯನದನ್ನಡವನಿರಿಸಿ ನೀ
ಬಿಡಿಸಿಕೋ ಬಳಿಕವೆನಲು
ಮಡದಿ ಕರನೊಂದಕಟ ಪೊಡವಿಪತಿ ಮಾಡಿದ ಕೇ
ಡಡಸಿತಲ್ಲದಡೆನ್ನ ಗುಪ್ತಮಂಗಳಸೂತ್ರ
ದೆಡೆಯಹೊಳೆಹೊಳೆವೈದೆದಾಳಿಯನಿದಂ ಶ್ವಪಚ
ನೆಂತು ಕಂಡಪನೆಂದಳು ॥ ೨೬

ವಿಗತಸಪ್ತದ್ವೀಪಪತಿಯ ಬಸುಱಲಿ ಬಂದು
ಮಗನೆ ನಿನಗೊಮ್ಮೆಟ್ಟು ಸುಡುಗಾಡು ಹಗೆಯಾಯ್ತೆ
ಮಿಗೆ ಸಕಲಲೋಕದೊಳು ತನ್ನಾಣೆ ಸಲುವವನ ಕು
ಮಾರನೆನಿಸುವ ನಿನ್ನನು
ಬಗೆಯದೀ ಚಂಡಾಲನಾಣೆಯಿಡುವಂತಾಯ್ತೆ
ಜಗದ ನವನಿಧಿಗೊಡೆಯನಾತ್ಮಭವನೆನಿಸಿ ಮು
ಟ್ಟಿಗೆಯ ಸುಂಕದ ಹಾಗವಿಲ್ಲಾಯ್ತೆ ಮಗನೆ ಎಂ
ದಳಲಿದಳು ಹಂಬಲಿಸುತ ॥ ೨೨

ವನಿತೆಯಳಲಂ ಕೇಳ್ದು ನಡುಗಿ ವಿಶ್ವಾಮಿತ್ರ
ಮುನಿಯೆನಗೆ ಮತ್ತೆ ಮಾಡಿದ ತೊಡಕಿದಾಗದಿರ
ದೆನುತ ಮನದೊಳು ಮಱುಗುತಾವ ಲೋಕದೊಳಾಣೆ
ಸಲುವುದೆನಿಸುವ ಭೂಪನ
ತನಯಂ ನೀ ತರಳನೆಲೆ ತರುಣಿ ನೆಲದೆಱೆಯನಿ
ಕ್ಕೆಸಲು ಕೊಡಲಿಲ್ಲದಧಿಕರ ಪೆಸರ್ಗೊಳಲು ಬಿಡು
ವನೆ ಶೋಕಿಸುವ ಹೊತ್ತು ಹುಸಿದು ಶೋಕಿಸುವೊಡೇ
ನಹುದೆಂದನವನೀಶನು ॥ ೨೩

ಒಂದುಳಿದ ಸಂಪದವನೆಣಿಸುವುದು ಹುಸಿಯಲ್ಲ
ವಿಂದೀಗ ತೋಱಬಪ್ಪುದ ಹುಸಿಯದುಂಟೆ ತ
ಪ್ಪೆಂದಡಕೇನಾತನಾರ ಮಗನಾವ ಪೆಸ
ರಾವ ನಾಡರಸನೆನಲು
ಸಂದ ರವಿಕುಲತಿಲಕನೆನಿಪಾ ತ್ರಿಶಂಕುವಿನ
ನಂದನನಯೋಧ್ಯಾಧಿಪತಿ ಹರಿಶ್ಚಂದ್ರನೆನೆ
ನೊಂದಾತನಂಗನೆ ಕುಮಾರರೀನಾದರೆ
ಲ್ಲಿರ್ದಪರು ಹೇಳೆಂದನು ॥ ೨೪

ಪ್ರೌಡವೀಶ್ವರಂ ಹಿಂದೆ ಹರಸಿ ಹಾಳಂ ಬಿಟ್ಟು
ಹಡೆದ ಸುತನೀತನಾತನ ವನಿತೆ ನಾನೆನಲು
ಮಡಿದ ಕಾರಣವಾವುದೀ ತನಯನೆಂದಡೆ
ಮ್ಮಿಬ್ಬರಂ ಮಾಱುಗೊಂಡ
ಒಡೆಯನರಮನೆಗೆ ಹುಲುಹುಳ್ಳಿಯಂ ತಪ್ಪೆನೆಂ
ದಡವಿಗೆಯ್ದಿದಡಲ್ಲಿ ಕಾಳೋರಗಂ ಕಚ್ಚಿ
ಮಡಿದನೀ ಕಂದನೀ ವಿಧಿಗೆ ಸೇರಿತು ಹರಿ
ಶ್ಚಂದ್ರನಿರವೇನೆಂದಳು ॥ ೩೦

ನುಡಿಯಲಱಿಯದೆ ಸಕಲರಾಜ್ಯಮಂ ಹೋಗಾಡಿ
ಕಡೆಗಧಿಕಋಣಿಯಾಗಿ ನೆಲೆಗೆಟ್ಟು ಮಂತ್ರಿವೆರ
ಸಡವಿಗುಱಿಯಾಗಿ ಕೈವಿಡಿದ ಸತಿಪುತ್ರರಂ
ಮಾಱಿ ಸುಕ್ಷೇತ್ರದೊಳಗೆ
ಕಡೆಗೆ ಚಂಡಾಲಕಿಂಕರನಾಗಿ ದೋಷಕ್ಕೆ
ನಡುಗದೆ ಕುಲಾಚಾರಮಂ ಬಿಟ್ಟು ಜನಕೆ ನಗೆ
ಗೆಡೆಯಾದ ಪಾತಕ ಹರಿಶ್ಚಂದ್ರನವನನೇ
ನೆಂದು ನೆನೆದಪೆಯೆಂದನು ॥ ೩೧

ಜಡೆವೊತ್ತಡಂ ಹಸಿಯ ತೊವಲುಟ್ಟಡಂ ನಾಡ
ಸುಡುಗಾಡಿನೊಳಗಿರ್ದಡಂ ನರಕಪಾಲಮಂ
ಪಿಡಿದಿರ್ದಡಂ ತಿರಿದು ವಿಷವುಂಡಡಂ ಶವಶಿ
ರೋಮಾಲೆಗಟ್ಟಿರ್ದಡಂ
ಕಡುಮರುಳ್ಪಡೆಯ ಸಂಗಡ ಬತ್ತಲಿರ್ದಡಂ
ಮೃಡನಲ್ಲದಖಿಲಲೋಕಕ್ಕೊಡೆಯನಿಲ್ಲೆಂಬ
ನುಡಿಯಂತಿರೆನಗಾ ಹರಿಶ್ಚಂದ್ರನಲ್ಲದಿ
ನ್ನಾರು ಗತಿಮತಿಯೆಂದಳು ॥ ೩೨

ಉಱುವಬಲೆಯುಚಿತವಚನಂ ಕರ್ಣಪಥದಿನೊಳ
ಗೆಱಗಿ ಚಿತ್ರವನು ತೊತ್ತಳದುಳಿದು ಧೈರ್ಯವುಂ
ಬಱಿಕೈದು ಕರಣಂಗಳಂ ಕದಡಿ ಹೆಮ್ಮೆಯುಂ
ಹಱಿದಳನಲನೊದೆದೆಬ್ಬಿಸಿ
ಮಱುಕಮಂ ಮಸೆದು ಕಂಬನಿವೊನಲ ಕೋಡಿಯುಂ
ಕೊಱೆದು ಮತಿಗತಿಮಾಯೆಯುಂ ತೋಱಿ ಮೀಱಿ ನೇ
ಸಱ ಕುಲಜನೋರಂತೆ ಸಿಗ್ಗಾಗಿ ತಾ ಮಾಡಿ
ದಪರಾಧಮಂ ನೆನೆದನು ॥ ೩೩

ಈ ಸತಿಯನೀ ಶುಚಿಯನೀ ಪತಿವ್ರತೆಯನಾ
ನೀಸು ಧಾವತಿಗೊಳಗುಮಾಡಿದೆನು ನೀಚದ್ವಿ
ಜೇಶಂಗೆ ಮಾಱಿ ಮಱಿದೀ ಸುತನನೀ ಸುಱಿಯ
ನೀ ಸೊಬಗ ಸುಕುಮಾರನ
ಓಸರಿಸದುರಗ ಕೊಲುವಂತೆ ಮಾಡಿದೆನೆಂಬ
ಹೇಸಿಕೆಯ ವಾರಾಸಿ ತುಂಬಿ ತುಳುಕಾಡಿ ಹೊಱ
ಸೂಸುವಳಲಂ ನಿಲಿಸಿ ನಿಲಿಸಲಾಱದೆ ಮಗನ
ಮೇಲೆ ದೊಪ್ಪನೆ ಕೆಡೆದನು ॥ ೩೪

ತನಗೆ ಹೊಯ್ವಾಕ್ಕೆಯಪ್ಪ ಭೂಭುಜರನೋಲೈಸಿ
ಧನವನಾರ್ಜಿಸಿ ತಂದು ಸೆಱೆಯ ಬಿಡಿಸುವನೆಮ್ಮ
ಜನಪನೆಂದಾನಿರಲು ಮಾದಿಗಂಗಾಳಾಗಿ
ಸುಡುಗಾಡ ಕಾವ ಭಾಗ್ಯ
ನಿನಗಾಯ್ತೆ ಭೂಪಾಲ ಎಂದು ದುಃಖಕ್ಕೆ ಪು
ತ್ರನ ಶೋಕದುರಿಗೆ ತನು ಹೇವರಿಸಿ ವನಿತೆ ತಾ
ಮನನೊಂದು ಬೆಂದು ಬೆಱಗಾಗಿ ಚಿಂತಿಸುತ ತೂ
ಕದ ಕೋಲ ತೊಲೆಯಾದಳು ॥ ೩೫

ಪ್ರಕಟರಾಜ್ಯಭ್ರಷ್ಟನಾಗಿ ಚಂಡಾಲಸೇ
ವಕನಾದ ಪಾಪಿಯಂ ನೀಚನನನೂನ ಪಾ
ತಕನನೆನ್ನಂ ಪೋಲ್ತು ಕೆಡದೆ ನಿಮ್ಮಜ್ಜ ತ್ರಿ
ಶಂಕುಭೂವರನಂದದಿ
ಸಕಲರಾಜ್ಯಕ್ಕೊಡೆಯನಾಗದಿರನೀ ಕುಮಾ
ರಕನೆಂಬ ನಂಬುಗೆಯಲಾನಿರಲು ಕಂದ ನೀ
ನಕಟ ನಿಷ್ಕಾರಣಂ ಮಡಿವರೇ ತಂದ ಎಂ
ದಳಲತೊಡಗಿದನರಸನು ॥ ೩೬

ಮುಂದೆ ನೀನಾಳಲಿಹ ಧರೆಯನನ್ಯರಿಗಿತ್ತ
ನೆಂದು ನುಡಿಸೆಯೊ ಮತ್ತದಲ್ಲದೆಮ್ಮಿಬ್ಬರಂ
ತಂದು ಲೋಗರಿಗೆ ಮಾಱಿದನೆಂದು ನುಡಿಸೆಯೋ
ಚಂಡಾಲಸೇವೆಮಾಡಿ
ನಿಂದೆಯಿಲ್ಲದ ಸೂರ್ಯಕುಲಕೆ ಕುಂದಂ ತಂದ
ನೆಂದು ನುಡಿಸೆಯೊ ನುಡಿಯದಿಹ ಹದನನಱುಪಬೇ
ಕೆಂದೊಱಲಿ ಬಾಯ್ಬಿಟ್ಟು ಕರೆದು ಹಾರಿದನು ಸುತ
ನಲ್ಲಿ ಮಾಱುತ್ತರವನು ॥ ೩೭

ಅರಿರಾಯರೊಳು ಕಾದಿ ಮಡಿದಾತನಲ್ಲ ಮುನಿ
ವರರ ಯಾಗವ ಕಾದು ಮಡಿದಾತನಲ್ಲ ದೇ
ವರಿಗೆ ಹಿತವಾಗಿ ಮಡಿದವನಲ್ಲ ಮಾಂಸದಾ
ನವ ಬೇಡಿದರ್ಗೊಡಲನು
ಅಱಿದರಿದು ಕೊಟ್ಟು ಮಡಿದವನಲ್ಲ ಹುಳ್ಳಿಯಂ
ತರಹೋಗಿ ಕಾಡೊಳಗೆ ಬಡಹಾವು ಕಚ್ಚಿ ಮುನಿ
ವರಿಗೆ ನಗೆಗೆಡೆಯಾಗಿ ನಿಷ್ಕಾರಣಂ ಮಡಿವ
ರೇ ಕಂದ ಹೇಳೆಂದನು ॥ ೩೮

ಸುತನ ರೂಪಿನ ಸೊಬಗನಂಗಸುಕುಮಾರದು
ನ್ನತಿಯ ಬಾಲ್ಯದ ಚೆಲುವನೆಲ್ಲಾ ಕಳಾಪ್ರವೀ
ಣತೆಯ ಗರುವಿಕೆಯ ಗಾಡಿಯ ಧೃತಿಯನೊಟ್ಟಜೆಯ
ನಳವಟ್ಟ ನುಡಿಯ ಚದುರ
ನುತಲಕ್ಷಣಾವಳಿಯನಧಿಕಗುಣಗಣವನಾ
ಯತಿಗೆಟ್ಟು ನೆನೆದು ಶೋಕಿಪೆನೆಂದಡಾ ಕಲ್ಪ
ಶತವೆಯ್ದುದರಸ ದುಃಖವನು ಸಂತೈಸಿಕೊಂ
ಡೆನ್ನನವಧರಿಸೆಂದಳು ॥ ೩೯

ಪುದಿದಿರುಳು ಕಡೆಗಾಣ್ಬ ಕುಱುಹಾಗುತಿದೆ ಸೂರ್ಯ
ನುದಯಿಸಿದನಾದಡೆನ್ನವರೆನ್ನನಱಿಸಿ ತಳು
ವಿದಳೆಂದು ಕೊಲ್ಲದಿರರೀ ಕುಮಾರನನೀಗ
ದಹಿಸಬೇಕರಸ ಎಂದು
ಸುದತಿ ನುಡಿಯಲು ನುಡಿದನವನೀಶ ತೆಱೆಯನಿ
ಕ್ಕದೆ ಸುಡಲ್ಬಾರದುಳ್ಳಡೆ ಕೊಡಿಲ್ಲದಡೆ ಬೇ
ಗದಿ ಹೋಗಿ ನಿನ್ನೊಡೆಯನಂ ಬೇಡಿ ತಾ ತಾರ
ದಿರೆ ಸುಡಲ್ಬೇಡೆಂದನು ॥ ೪೦

ಒಡೆಯರೀವವರಲ್ಲವೆನೆ ಬೇಡಿ ನೋಡಿ ಕೊಡ
ದಪ ಋಣಂಬಡು ಋಣಂ ಹುಟ್ಟದಿರ್ದಡೆ ಸುಡುವ
ಗೊಡವೆ ಬೇಡೆನ್ನೆಗಂ ಬಂದನಿತು ಬಕ್ಕೆಂದು
ತರುಣನುಟ್ಟುದನು ಕೊಂಡು
ಪೊಡವೀಶ್ವರಂ ತಿರುಗಿ ತನ್ನ ಕಾಪಿನ ಗುಡಿಗೆ
ನಡೆಗೊಂಡನತ್ತಲಿತ್ತಲ್ ಪುರಕೆ ಬರುತಿಪ್ಪ
ಮಡದಿಗೆಡೆವಟ್ಟೆಯೊಳು ಬಂದ ಸಂಕಟವನಿ
ನ್ನಾವ ಜೀವರು ಕೇಳ್ವರು ॥ ೪೧

೪

# ಕುಮಾರವ್ಯಾಸ : ‘ ಕರ್ಣನ ಸತ್ವಪರೀಕ್ಷೆ ’

ಸೂಚನೆ॥ ಸೆಣಸುವದಟರ ಗಂಡ ಸಮರಾಂ
ಗಣಕತುಳಭೇರುಂಡನಾ ದಿನ
ಮಣಿಯ ಮಗನುದ್ದಂಡಕರ್ಣನ ಕಂಡಳಾ ಕುಂತಿ ॥

ಒಲಿದವರನುಜ್ಜೀವಿಸುವ ಬಗೆ
ಬಲುಹು ಮುರಮಥನಂಗೆ ಮುನಿದೊಡೆ
ತಲೆಯ ಬರೆಹವ ತೊಡೆವನಲ್ಲದೆ ಬಳಿಕ ಸೈರಿಸನು
ನಳಿನನಾಭನು ಭಜಕರಿಗೆ ಬೆಂ
ಬಳಿಯ ಬಿರುದನು ಭೇದದಲಿ ಕೌರು
ಕುಲವ ಕೊಂದನು ಕೇಳು ಜನಮೇಜಯಮಹೀಪಾಲ ॥ ೧

ಇನತನೂಜನ ಕೂಡೆ ಮೈದುನ
ತನದ ಸರಸವನೆಸಗಿ ರಥದೊಳು
ದನುಜರಿಪು ಬರಸೆಳೆದು ಕುಳ್ಳಿರಿಸಿದನು ಪೀಠದಲಿ
ಎನಗೆ ನಿಮ್ಮಡಿಗಳಲಿ ಸಮಸೇ
ವನೆಯೆ ದೇವ ಮುರಾರಿಯಂಜುವೆ
ನೆನಲು ತೊಡೆಸೋಂಕಿನಲಿ ಸಾರಿದು ಶೌರಿಯಿಂತೆಂದ ॥ ೨

ಭೇದವಿಲ್ಲೆಲೆ ಕರ್ಣ ನಿಮ್ಮೊಳು
ಯಾದವರು ಕೌರವರೊಳಗೆ ಸಂ
ವಾದಿಸುವಡನ್ವಯದ ಮೊದಲೆರಡಿಲ್ಲ ನಿನ್ನಾಣೆ
ಮೇದಿನೀಪತಿ ನೀನು ಚಿತ್ತದೊ
ಳಾದುದಱವಿಲ್ಲೆನುತ ದಾನವ
ಸೂದನನು ರವಿಸುತನ ಕಿವಿಯಲಿ ಬಿತ್ತಿದನು ಭಯವ ॥ ೩

ದಾನವಾಂತಕ ಬೆಸಸು ವಂಶವಿ
ಹೀನನನು ನಿಮ್ಮಡಿಗಳೊಡನೆ ಸ
ಮಾನಿಸುವರೇ ಸಾಕೆನುತ ರವಿಸೂನು ಕೈಮುಗಿಯೆ
ಮಾನನಿಧಿ ನನ್ನಾಣೆ ಬಾರೈ
ನೀನು ನಮ್ಮೆಲ್ಲರ ಹವಣೆ ವರ
ಭಾನುವಂಶಲಲಾಮ ನೀ ರಾಮಂಗೆ ಸರಿಯೆಂದ ॥ ೪

ಕಳೆದುಕೊಂಡನು ವೀಳೆಯವನಂ
ಜುಳಿಯಲಾತಂಗಿತ್ತು ಕರ್ಣನ
ಕೆಲಕೆ ಬರಸೆಳೆದವನ ಕರದೊಳು ಕರವ ತಳಕಿಕ್ಕಿ
ಎಲೆ ದಿವಾಕರತನಯ ನಿನ್ನಯ
ಕುಲವನಱಯೆಯಲಾ ಸುಯೋಧನ
ನಲಿ ವೃಥಾ ಸೇವಕತನದಲಿಹುದುಚಿತವಲ್ಲೆಂದ ॥ ೫

ಲಲನೆ ಕಾ ಪಡೆದೈದು ಮಂತ್ರಂ
ಗಳಲಿ ಮೊದಲಿಗ ನೀನು ನಿನ್ನಯ
ಬಳಿ ಯುಧಿಷ್ಠಿರದೇವ ಮೂಱನೆಯಾತ ಕಲಿಭೀಮ
ಫಲುಗುಣನು ನಾಲ್ಕನೆಯಲೈದನೆ
ಯಲಿ ನಕುಲಸಹದೇವರಾದರು
ಬಳಿಕ ಮಾದ್ರಿಯಲೊಂದು ಮಂತ್ರದೊಳಿಬ್ಬರುದಿಸಿದರು ॥ ೬

ಅದಱಿಂನಾ ಪಾಂಡವರಲೈವರ
ಮೊದಲಿಗನು ನೀನಿರಲು ಧರಣಿಯ
ಕದನವಿತ್ತಂಡಕ್ಕೆ ಕಾಮಿತವಲ್ಲ ಭಾವಿಸಲು
ಇದು ನಿಧಾನವು ಕರ್ಣ ನಿನ್ನ
ಭ್ಯುದಯವನೆ ಬಯಸುವೆನು ನಿನ್ನಯ
ಪದಕೆ ಕೆಡಹುವೆನೈವರನು ನಡೆ ತನ್ನ ಸಂಗಾತ ॥ ೭

ನಿನಗೆ ಹಸ್ತಿನಪುರದ ರಾಜ್ಯದ
ಘನತೆಯನು ಮಾಡುವೆನು ಪಾಂಡವ
ಜನಪಕೌರವಜನಪರೋಲೈಸುವರು ಗದ್ದುಗೆಯ
ನಿನಗೆ ಕಿಂಕರವೆರಡು ಸಂತತಿ
ಯೆನಿಸಲೊಲ್ಲದೆ ನೀನು ದುರ್ಯೋ
ಧನನ ಬಾಯ್ದಂಬುಲಕೆ ಕೈಯಾನುವರೆ ಹೇಳೆಂದ ॥ ೮

ಎಡದ ಮೈಯಲಿ ಕೌರವೇಂದ್ರರ
ಗಡಣ ಬಲವಲಿ ಪಾಂಡುತನಯರ
ಗಡಣವಿದಿರಲಿ ಮಾದ್ರ ಮಾಗಧ ಯಾದವಾದಿಗಳು
ನಡುವೆ ನೀನೋಲಗದೊಳೊಪ್ಪುವ
ಕಡುವಿಳಾಸವ ಬಿಸುಟು ಕುರುಪತಿ
ನುಡಿಸೆ ಜೀಯ ಹಸಾದವೆಂಬುದು ಕಷ್ಟ ನಿನಗೆಂದ ॥ ೯

ಶೌರಿಯಡಲಿದಿರಿಲ್ಲ ಕುಲದಲಿ
ಸೂರಿಯನ ಮಗನೊಡನೆ ಹುಟ್ಟಿದ
ವೀರರೈವರು ಪಾಂಡುತನಯರು ನಿನ್ನ ವೈಭವಕೆ
ಆರು ಸರಿಯೈ ಕರ್ಣ ನಡೆ ನಡೆ
ಧಾರುಣೀಪತಿಯಾಗಿ ನೀನಿರೆ
ವೈರವಿತ್ತಂಡಕ್ಕೆ ಬಳಿಕಿಲ್ಲೆಂದನಸುರಾರಿ ॥ ೧೦

ಕೊರಳ ಸೆರೆ ಹಿಗ್ಗಿದುವು ದೃಗುಜಲ
ವುರವಣಿಸಿ ಕಡುನೊಂದನಕಟಾ
ಕುರುಪತಿಗೆ ಕೇಡಾದುದೆಂದನು ತನ್ನ ಮನದೊಳಗೆ
ಹರಿಯ ಹಗೆ ಹೊಗೆದೋರಿದುದುಹದ
ಬರಿದೆ ಹೋಹುದೆ ತನ್ನ ಜನನವ
ನರುಹಿ ಕೊಂದನು ಹಲವು ಮಾತೇನೆಂದು ಚಿಂತಿಸಿದ ॥ ೧೧

ಕಾದಿ ಕೊಲುವೊಡೆ ಪಾಂಡುಸುತರು ಸ
ಹೋದರರು ಕೊಲಲಿಲ್ಲ ಕೊಲ್ಲದೆ
ಕಾದೆನಾದೊಡೆ ಕೌರವಂಗವನಿಯಲಿ ಹೊಗಲಿಲ್ಲ
ಭೇದದಲಿ ಹೊಕ್ಕಿರಿದನೋ ಮಧು
ಸೂದನನು ತಾನಕಟೆನುತ ಚಿಂ
ತೋದಧಿಯಲದ್ದವೊಲು ಮೌನದೊಳಿದ್ದನಾ ಕರ್ಣ ॥ ೧೨

ಏನು ಹೇಳೈ ಕರ್ಣ ಚಿತ್ತ
ಗ್ಲಾನಿಯಾವುದು ನಿನಗೆ ಕುಂತೀ
ಸೂನುಗಳ ಬೆಸಕೈಸಿಕೊಂಬುದು ಸೇರದೇ ಮನಕೆ
ಹಾನಿಯಿಲ್ಲೆನ್ನಾಣೆ ನುಡಿ ದು
ಮ್ಮಾನವೇತಕೆ ಮರುಳತನ ಬೇ
ಡಾನು ನಿನ್ನಪದೆಸೆಯ ಬಯಸುವನಲ್ಲ ಕೇಳೆಂದ ॥ ೧೩

ಮರುಳು ಮಾಧವ ಮಹಿಯ ರಾಜ್ಯದ
ಸಿರಿಗೆ ಸೋಲುವನಲ್ಲ ಕೌಂತೇ
ಯರು ಸುಯೋಧನನೆನಗೆ ಬೆಸಕೈವಲ್ಲಿ ಮನವಿಲ್ಲ
ಹೊರೆದ ದಾತಾರಂಗೆ ಹಗೆವರ
ಶಿರವನರಿದೊಪ್ಪಿಸುವೆನೆಂಬೀ
ಭರದೊಳಿರ್ದೆನು ಕೌರವೇಂದ್ರನ ಕೊಂದೆ ನೀನೆಂದ ॥ ೧೪

ಒಡನೆ ಹುಟ್ಟಿದೆವೆಂಬ ಕಥನವ
ನೆಡೆಗೊಡದೆ ಬಣ್ಣಿಸಿದೆ ಪಾಂಡವ
ರಡುಗು ಬಾಣಕೆ ಬಲಿಯೆನಿಪ್ಪೀ ಛಲವ ಮಾಣಿಸಿದೆ
ನುಡಿದು ಫಲವೇನಿನ್ನು ಕೌರವ
ರೊಡೆಯನಾದಂತಹೆನು ಬಾರೆನು
ಪೊಡವಿಯಲಿ ನೀ ಹರಹಿಕೊಳು ನಿನ್ನವರ ನಿಲಿಸೆಂದ ॥ ೧೫

ಹಲವು ಮಾತೇನಖಿಳಜನವೆ
ನ್ನಳಿವ ಸೊಗಸದು ಕೌರವೇಶ್ವರ
ನೊಲುಮೆ ತಪ್ಪಿಸೆ ಭುವನದೊಳಗೆನಗಾಪ್ತಜನವಿಲ್ಲ
ಸಲಹಿದನು ಮನ್ನಣೆಯಲೆನಗ
ಗ್ಗಳಿಕೆಯಲ್ಲದೆ ಹೀನವೃತ್ತಿಯ
ಬಳಸಿ ನಡೆಸನು ಕೌರವೇಂದ್ರನನೆಂತು ಮುಱಿದಪೆನು ॥ ೧೬

ನೋಡಿ ತಣಿಯನು ಬಿರುದ ಹೊಗಳಿಸಿ
ಹಾಡಿ ತಣಿಯನು ನಿಚ್ಚಲುಚಿತವ
ಮಾಡಿ ತಣಿಯನು ಮಾನನಿಧಿಯನದೆಂತು ಮುಱಿದಪೆನು
ಕಾಡಲಾಗದು ಕೃಷ್ಣ ಖಾತಿಯ
ಮಾಡಲಾಗದು ಬಂದೆನಾದೊಡೆ
ರೂಢಿ ಮೆಚ್ಚದು ಕೌರವನ ಹಗೆ ಹರಿಬ ತನಗೆಂದ ॥ ೧೭

ವೀರಕೌರವರಾಯನೇ ದಾ
ತಾರನಾತನ ಹಗೆಯೆ ಹಗೆ ಕೈ
ವಾರವೇ ಕೈವಾರವಾದಂತಹೆನು ಕುರುನೃಪತಿ
ಶೌರಿ ಕೇಳೈ ನಾಳೆ ಸಮರದ
ಭಾರದಲಿ ತೋಱುವೆನು ನಿಜಭುಜ
ಶೌರಿಯದ ಸಂಪನ್ನತನವನು ಪಾಂಡುತನಯರಲಿ ॥ ೧೮

ಅರುಣಜಲದಾಜ್ಯದಲಿ ಬಂಬಲು
ಗರುಳ ಚರುವಿನಲೆಲುವಿನೊಟ್ಟಿಲ
ಬೆರಳ ಸಮಿಧೆಯಲಡಗಿನಖಿಳಾಹುತಿಯ ರಚನೆಯಲಿ
ನರಕಪಾಲದ ಪಾತ್ರೆಯಲಿ ನಿಡು
ತೆರಳೆಗಳ ಕೇಶೌಘದರ್ಭಾಂ
ಕುರದಲಾಹವಯಜ್ಞದೀಕ್ಷಿತನಹೆನು ತಾನೆಂದ ॥ ೧೯

ಮಾರಿಗೌತಣವಾಯ್ತು ನಾಳಿನ
ಭಾರತವು ಬಹುಜೀವಹರವೀ
ಕೌರವನ ಋಣ ಹಿಂಗೆ ರಣದಲಿ ಸುಭಟಕೋಟಿಯನು
ತೀರಿಸಿಯೆ ಪತಿಯವಸರಕ್ಕೆ ಶ
ರೀರವನು ನೂಕುವೆನು ನಿನ್ನಯ
ವೀರರೈವರ ನೋಯಿಸೆನು ರಾಜೀವಸಖನಾಣೆ ॥ ೨೦

ಎನಲು ಕರ್ಣನ ದೃಢವ ಕಂಡನು
ಮನದೊಳುತ್ಸಾಹಿಸಿದನಾದೊಡೆ
ತನಯರೈವರ ಹದನು ನಿನ್ನದು ಬಲುಹ ಮಾಡುವೊಡೆ
ಮನಕೆ ಖತಿಯಹುದಬುಹದಿರ್ದೊಡೆ
ತನಗೆ ಗುಣವಲ್ಲೆಂಬ ಕಾರಣ
ವಿನಿತನೊಡ್ಡೈಸಿದೆನು ನೀ ಸುಖಿಯಾಗು ಹೋಗೆಂದ ॥ ೨೧

ಬಂದರೊಳ್ಳಿತು ಬಾರದಿದ್ದೊಡೆ
ಕಂದ ಕೇಳ್ಳೈ ಮಧುರವಚನದಿ
ಮಂದಮತಿಯನು ತಿಳುಹಿ ತಮ್ಮಂದಿರಿಗೆ ರಾಜ್ಯವನು
ಇಂದು ಕೊಡಿಸುವುದುಚಿತ ಸಂಪ್ರತಿ
ಗೆಂದು ಸೇರಿಸು ನಿನ್ನ ಮಾತನು
ಹಿಂದುಗಳೆಯನು ಕೌರವೇಶ್ವರನೆಂದನಸುರಾರಿ ॥ ೨೨

ಮಸೆದುದಿತ್ತಂಡದಲಿ ಮತ್ಸರ
ವೆಸಮಸಂಗರವೀರ ಸಂಧಿಯು
ನುಸುರಿದರೆ ಮನಗಾಣನೇ ಕೌರವಮಹೀಶ್ವರನು
ವಿಸಸನದ ಕಟ್ಬಾಳು ಮಂತ್ರವ
ನೆಸಗಲಾಗದು ತನ್ನ ವೀರಕೆ
ನುಸುಳಹುದು ಮುರವೈರಿ ಸಂಧಿಯನಱಿಯೆ ನಾನೆಂದ ॥ ೨೩

ಕಳುಹಬೇಹುದು ದೇವ ದಿನಪತಿ
ಯಿಳಿದನಪರಾಂಬುಧಿಗೆ ಸಂಪ್ರತಿ
ಯಳಿದ ಹೊತ್ತಿಂದೀಗ ನೆಟ್ಟನೆ ನೀವು ಪಾಂಡವರು
ಹುಲುಸರವಿ ಹಾವಹುದು ಹುತ್ತಿನ
ತಲೆಯಲಿರಲಜ್ಞರಿಗೆ ಹಿಸುಣರ
ಬಳಕೆ ಹೋಗುವುದು ಕಳುಹಬೇಕೆಂದೆಱಗಿದನು ಕರ್ಣ ॥ ೨೪

ಬೀಳುಕೊಂಡನು ಮನೆಗೆ ಬಂದು ವಿ
ಶಾಲಮತಿ ಚಿಂತಿಸಿದನಾ ಸಿರಿ
ಲೋಲ ಮಾಡಿದ ಮಂತ್ರ ಮನದಲಿ ನಟ್ಟು ಬೇರ್ವರಿಯೆ
ಕಾಳುಮಾಡಿದನಕಟ ಕೌರವ
ಬಾಳಲಱಿಯದೆ ಕೆಟ್ಟನೀ ಗೋ
ಪಾಲ ಬಱಿದೇ ಬಿಡನು ಜೀವವ ಕೊಳ್ಳದಿರನೆಂದ ॥ ೨೫

ವೀರರವಿಸುತನೊಂದು ದಿನ ರವಿ
ವಾರದಲಿ ಪರಿತೋಷ ಮಿಗೆ ಭಾ
ಗೀರಥೀತೀರದಲಿ ತಾತಂಗರ್ಘ್ಯವನು ಕೊಡುತ
ಸೌರಮಂತ್ರವ ಜಪಿಸುತಿರಲಾ
ದಾರಿಯದ ಸುರತರುವ ಕುಂತೀ
ನಾರಿ ಕಾಣಲು ಬಂದಳಾತ್ಮಜನಿದ್ದ ನದಿಗಾಗಿ ॥ ೨೬

ಬರಲು ತಾಯ್ಗಿದಿರಾಗಿ ರವಿಸುತ
ನಿರದೆ ಬಂದನು ದಂಡದಂತಿರೆ
ಚರಣದಲಿ ಮೈಯಿಕ್ಕಲಾತನ ನೊಸಲ ನೆಗಹಿದಳು
ಬರಸೆಳೆದು ಬಿಗಿಯಪ್ಪಿದಳು ನೀ
ರುರವಣಿಸಿದವು ನಯನದಲಿ ಸೆರಿ
ಕೊರಳಿಗೌಕಿದುದಳಲಿನಬುಧಿಯೊಳದ್ದಳಾ ಕುಂತಿ ॥ ೨೭

ಆ ಸಮಯದಲಿ ಗಂಗೆ ನಾರೀ
ವೇಷದಲಿ ನಡೆತಂದಳೆಲೆ ಕುಂ
ತೀಸತಿಯೆ ಕೈಲೆಡೆಯ ಕಂದನನೊಪ್ಪುಗೊಳು ನೀನು
ಈಸು ದಿನವಿವನಾಗುಹೋಗಿನ
ವಾಸಿಯಲಿ ತಲೆಗಾದೆನೆನ್ನಯ
ಭಾಷೆ ಸಂದುದೆನುತ್ತ ತಾಯಿಗೆ ಕೊಟ್ಟಳಾತ್ಮಜನ ॥ ೨೮

ಇರಲಿರಲು ರವಿ ಬಂದನೆಕ್ಕಟಿ
ಕರೆದನೀತನ ಕಿವಿಯೊಳೆಲ್ಲವ
ನೊರೆದ ನಿನಗೆಲೆ ಮಗನೆ ಕುಂತೀದೇವಿ ತಾಯಹುದು
ಮುರಹರನ ಮತದಿಂದ ನಿನ್ನಯ
ಸರಳ ಬೇಡಲು ಬಂದಳೆಂದಿನ
ಹರಿಗೆ ಕವಚವನಿತ್ತವೊಲು ಮರುಳಾಗಬೇಡೆಂದ ॥ ೨೯

ಬೆಸಸಿತಕ್ಕೆ ಹಸಾದವೆಂದನು
ಬಿಸಜಬಂಧುವ ಕಳುಹಿದನು ಮ
ನ್ನಿಸಿದನಿತ್ತಲು ಮಾತೆಯನು ಭಯಭರಿತಭಕ್ತಿಯಲಿ
ಒಸೆದು ಬಿಜಯಂಗೈದ ಹದನೇ
ನುಸುರಬೇಹುದು ತಾಯೆ ಎನೆ ಶೋ
ಕಿಸುತ ನುಡಿದಳು ಕುಂತಿ ಕರ್ಣನ ತೆಗೆದು ಬಿಗಿಯಪ್ಪಿ ॥ ೩೦

ಮಗನೆ ತಮ್ಮಂದಿರನು ಪಾಲಿಸು
ವಿಗಡತನವನು ಮಾಣು ಪರರೋ
ಲಗವ ನೀ ಮಾಡುವರೆ ನಿನಗಿತ್ತಂಡವನುಜರಲೇ
ಸೊಗಸು ತಾನೆಂದುದನು ಹಿಸುಣರ
ಹೊಗೆನುಡಿಯ ಕೇಳದಿರುಪಟ್ಟವ
ಬಿಗಿಸಿಕೊಳು ಸಲಿಸೆನ್ನ ವಚನವನೆಂದಳಾ ಕುಂತಿ ॥ ೩೧

ತಾಯಹುದು ತಾ ಬಲ್ಲೆನಿದನಾ
ಕಾಯಜನ ಪಿತನೆಱಹೆ ತಿಳಿದೆನು
ರಾಯರಿತ್ತಂಡಕ್ಕೆ ಪಟ್ಟದ ಹಿರಿಯ ತಾನಹುದು
ರಾಯನೆನ್ನನು ನಚ್ಚಿ ಹೊರೆದನು
ಸಾಯಲಳುಕುವೆನೇ ಸುಡೇತಱ
ದೀಯಿಳೆಯ ಬಾಳಿಕೆ ಕೃತಘ್ನರಿಗಿಲ್ಲ ಗತಿಯೆಂದ ॥ ೪೨

ಮಕ್ಕಳೈವರಿಗಾ ಹಿರಿಯನಿದು
ತಕ್ಕ ಮಾತೌ ಮಾತೆ ಸಂದೇ
ಹಕ್ಕೆ ನೆಲೆಯಿಲ್ಲದು ನಿಲಲಿ ಧಾರುಣಿಯ ಬಯಸುವರೆ
ತಕ್ಕುದೇ ದಾತಾರನರಸಿಯೊ
ಳೊಕ್ಕತನವಿರಲಾರು ಮೆಚ್ಚುವ
ರಕ್ಕ ಹೇಳೌ ಹೇಸಳೇ ಜಯಲಕ್ಷ್ಮಿ ತನಗೆಂದ ॥ ೪೩

ಇಂದು ನೀವಱಹಿದ ಬಳಿಕ ರವಿ
ನಂದನನುಯೆಂದಱಿದೆನಲ್ಲದೆ
ಹಿಂದೆ ದುರ್ಯೋಧನನದಾವುದ ನೋಡಿ ಸಲಹಿದನು
ಬಂದು ಪಾಂಡವರೊಡನೆ ಕೂಡಿದ
ರಿಂದು ಬಹುದಪಕೀರ್ತಿ ನಿಮ್ಮಡಿ
ಬಂದ ಕಾಲ್ಯವ ಬೆಸಸಿ ಬೇಗದೊಳೆಂದನಾ ಕರ್ಣ ॥ ೪೪

ಆದೊಡೈವರು ಮಕ್ಕಳನು ತಲೆ
ಗಾದು ತೋಱಿತ್ತೆ ಕಂದ ನಿನಗಿ
ನ್ನೀ ದುರಾಗ್ರಹವೊಪ್ಪುವುದೆ ಕೌರವನ ಸೇವೆಯಲಿ
ಹೋದ ಬಾಣವ ಮರಳಿ ತೊಡದಿರು
ಮಾಡುಕಳೆ ವೈರವನೆನಲ್ಕೆ ಹ
ಸಾದವೆಂದನು ಬೀಳುಕೊಟ್ಟನು ಬಂದನರಮನೆಗೆ ॥ ೩೫

## ೬

# ರತ್ನಾಕರ : ‘ ಭರತವಿಜಯ ’

ಕುಂದಣವದ್ರಿ ಪಚ್ಚೆಯ ಗಿರಿಯೆರಡೊಡ್ಡಿ
ನಿಂದುವು ಕಳದೊಳೆಂಬಂತೆ
ಸೌಂದರಾಯತದೀರ್ಘದೇಹಿಗಳಣ್ಣ ತ
ಮ್ಮಂದಿರೊಪ್ಪಿದರು ನೋಳ್ಪರಿಗೆ ॥ ೧

ಕೇಳು ಚಕ್ರಿಯ ದೇಹವೈನೂಱು ಮಾರುದ್ದ
ತೋಱಿತಂಗಜನ ಮೈಯದನು
ಮೀಱಿದಿಪ್ಪತ್ತೈದು ಮಾರುದ್ದವಣ್ಣನ
ಮೀಱಿ ನಡೆವುದ ಪೇಳ್ವಂತೆ ॥ ೨

ಸ್ಮರನ ಚೆಲ್ವಿಕೆಯ ಚಕ್ರಿಯ ಚೆಲ್ವನೆಲ್ಲವು
ಪರಿಕಿಸಿ ನೋಡಿದರಾಗ
ಧರೆಗೆ ಕಾಮನೆ ಚೆಲ್ವ ಕಾಮನಿಂದಾ ಚಕ್ರ
ಧರನೆ ಚೆನ್ನಿಗನೆನಲೆಸೆದ ॥ ೩

ಭೂರಿವಾದ್ಯದ ನಾದ ನಿಂದುದು ಕದನದ
ಭೇಱಿಯು ಸನ್ನೆ ಮಾತಿರಲಿ
ಆರಯು ನಾಲ್ಕೆಂಟು ನುಡಿವೇಳ್ವೆ ಮೊದಲೆಂದ
ನಾ ರಾಯ ಪಲರು ಕೇಳ್ವಂತೆ ॥ ೪

ಮನಸಿಜ ಕೇಳಣ್ಣ ನಿನಗೆನಗಿಂದು ದು
ರ್ಮನದಿಂದ ಜಗಳವಪ್ಪುದಕೆ
ಘನವೇನು ಹೇಳು ನಿಷ್ಕಾರಣ ಕದನವ
ಜನಪರಿಸಗುವರೆ ಎಂದ ॥ ೫

ನಿನ್ನೊಡವೆಯ ನಾನು ಕೊಂಡುದಿಲ್ಲಣ್ಣ ನೀ
ನೆನ್ನೊಡವೆಯ ಕೊಂಡುದಿಲ್ಲ
ಮುನ್ನಯ್ಯನಿರಿಸಿದಂದದಿ ರಾಜಯುವರಾಜ
ಸನ್ನಾಹದೊಳಗಿರ್ದೆವಲ್ತೆ ॥ ೬

ಆಗಲಾಗಲಿ ದೋಷವಿಲ್ಲಣ್ಣ ತಮ್ಮಂದಿ
ರಾಗಿಯು ನೋವಹುದದಕೆ
ಹಾಗದ ತೆಱಗೆ ಬೇಕೆಂದು ನಾ ನಿನ್ನೂರ
ಬಾಗಿಲ್ಗೆ ಭಟರನಟ್ಟಿದೆನೆ ॥ ೭

ನುಡಿಯಲ್ಲಿ ನಾ ನಿನ್ನ ಬಿಟ್ಟಾಡಿದೆನೆ ನನ್ನ
ಪಡೆಯೊಳಗೊಬ್ಬರಾಡಿದರೆ
ಒಡಹುಟ್ಟಿದವನ ನೋಡುವೆನೆಂದು ಬರಹೇಳೆ
ಘಡ ಹುಸಿಯೆಂಬರೆ ಅಪ್ಪಾ ॥ ೮

ನಿನಗಾನು ಪಗೆಯೆ ನೀನೆನಗೆ ಪಗೆಯೆ ಹೇಳು
ಜಿನಪುತ್ರರಿದನು ನಾವಿಂದು
ನೆನೆದಾಗ ಮುಂದೆ ಸಮಸ್ತರ್ಗೆ ದ್ರೋಹಶಾ
ಸನವ ಬರೆದುಕೊಟ್ಟೆವಲ್ತೆ ॥ ೯

ಮಾತಿಗೆ ತೊಡಗಿದ ಕದನಕಿಂದಿವನಿಗೆ
ಭೀತಿಯಾದುದೆ ಎನಬೇಡ
ಪೂತುಮಝುರೆಯೆನೆ ಕದನದೋರ್ಪನು ಕೇಳು
ಪಾತಕ ಕಳೆವೆನು ಮೊದಲು ॥ ೧೦

ಪರನೊಬ್ಬನೆನ್ನೊಡನಿದಿರಾದರಾಗಳೆ
ಬರಲೊಡನಟ್ಟಿ ಮೆಟ್ಟುವೆನು
ಧರೆ ಮೆಚ್ಚದಣ್ಣ ಸೋದರರ ಕಾಳಗಕೆ ಮುಂ
ದೊರೆಯುಬೇಕಂಕಪದ್ಧತಿಯು ॥ ೧೧

ನಾನಿಷ್ಟು ನಿನ್ನಿಂದ ಹಿರಿಯನಾದುದಱಿಂದ
ಸೇನೆಗೆ ಬರವೇಳ್ದೆನೈಸೆ
ನೀನೆನಗಗ್ರಜನಾದರೆ ನೀನಿರ್ದ
ಸ್ಥಾನಕೆಯ್ದದೆ ತಡೆದಿಹೆನೆ ॥ ೧೨

ಜಗದ ಭೂಭುಜರನಾಡಿಸಿ ನಾವು ನೋಡಿ ಪೆಂ
ಪೊಗೆದಿರೆ ಪೊತ್ತುಗಳೆಯದೆ
ನಗೆಗೆಡೆಯಾಗಿಂತು ನೆಗಳ್ವರೆ ದೊರೆಯೊದ್ದು
ಹಗರಣವಾಡಿದಂದದೊಳು ॥ ೧೩

ನನ್ನ ಗೆದ್ದುದಱಿಂದ ನಿನಗೆ ಕೀರ್ತಿಯೆ ಹೇಳು
ನಿನ್ನ ಗೆಲ್ದೆನಗೊಂದು ಜಸವೆ
ಪನ್ನಗನರಸುರಲೋಕದುತ್ತಮರು ಛೀ
ಯೆನ್ನರೆ ಯೋಚಿಸಿ ನೋಡು ॥ ೧೪

ಅದಕೇನು ನೀನಿಂತು ಕದನಕೆಯ್ದಿದೆಯೈಸೆ
ಕದನದೊಳ್ ಗೆಲವೈಸೆ ಕಡೆಗೆ
ಬದೆಗರಂದದಿ ಹೋರಲೇತಕೆ ಗೆಲವು ನಿ
ನ್ನದು ಸೋಲವೆನಗೆ ಹೋಗೆಂದ ॥ ೧೫

ದೊರೆಗಳು ಮಂತ್ರಿಸಖರು ಕಿವಿಮುಚ್ಚಿ ದೇ
ವರಿಗುಂಟೆ ಸೋಲವೆಂದೆನಲು
ಸ್ಮರಗಾರು ಸೋಲರ್ಕೆ ಹೆಣ್ಣು ಬಿಟ್ಟೆವೆ ನಾವು
ತರಹರಗೊಳ್ಳಿರ್ಕೆಯೆಂದ ॥ ೧೬

ಗೆಲವೆಂಬುದೇನುಪಚಾರವಲ್ಲಣ್ಣ ತೋ
ಳ್ಸಲವ ಬಲ್ಲೆನು ಸತ್ಯವಹುದು
ಬಲವೆಲ್ಲ ಕೇಳ್ವಂತೆ ಪೇಳ್ವೆನು ಕೇಳೆಂದು
ಬಳಿಕ ಚಕ್ರೇಶನಿಂತೆಂದ ॥ ೧೭

ದೃಷ್ಟಿವಿಜಯವೆಂತು ಪಂಚವಿಂಶತಿ ಚಾಪ
ದಷ್ಟುದ್ದ ಹೆಚ್ಚು ನೀನೆನ್ನ
ದೃಷ್ಟಿಸಬಹುದಾನು ನಿನ್ನ ನೋಳ್ಪಾಗೂರ್ಧ್ವ
ದೃಷ್ಟಿ ನೊಂದೆವೆಹೊಯ್ವುದೆಂದ ॥ ೧೮

ಇನಬಿಂಬದೊಳಗಣ ಪ್ರತಿಮೆಯ ಕಾಣ್ಬ ಲೋ
ಚನನಿಗಿಪ್ಪತ್ತೈದು ಮಾರು
ಘನವೆ ತನ್ನನ-ಜನ ತಿಳಿಪಲಾಡಿದನೆಂದು
ನೆನೆದರು ಸಖಮಂತ್ರಿನೃಪರು ॥ ೧೯

ಜಲಯುದ್ಧದೊಳು ನಾನ- ಚೆಲ್ಲೆ ನಿನ್ನೆದಮುಟ್ಟಿ
ಯಿಳಿವುದು ವಾರಿ ನೀನೆನ್ನ
ಮುಳುಗಿಸಿ ಬಿಡಬಹುದದರಿಂದ ಸನಗಾಗ
ಚಳಿತಡ್ಡಮೊಗವಹುದೆಂದ ॥ ೨೦

ಮುಗಿಲಿಗೆ ನೀರ ಚೆಲ್ಲುವ ಶಕ್ತಿಯುಂಟು ದೀ
ವುಗಳ ಹಲವು ತಾಳ್ದ ಸ್ಮರನ
ಅಗುಳಿಪ ಶಕ್ತಿಯುಂಟುಪಚಾರಕೆಂದನೆಂ
ದಗಣಿತನೃಪರೆಣಿಸಿದರು ॥ ೨೧

ಮಲ್ಲಗಾಳಗನೆಂತು ಭುಜಬಲಿಯೆಂದಯ್ಯ
ನಲ್ಲವೆ ಪೆಸರಿಟ್ಟನಂದು
ಬಲ್ಲೆನಯ್ಯನ ವಾಕ್ಯ ಹುಸಿಯದು ಭುಜಬಲ
ದಲ್ಲಿ ನೀನೆತ್ತುವೆಯೆಂದ ॥ ೨೨

ಭುಜಬಲಿಯೆಂದರೆ ಚಕ್ರಿಯ ಗೆಲ್ವರ್ಥ
ಭಜನೆಯೆ ತನ್ನ ಸೋದರನ
ಸುಜನಚಿಂತಾಮಣಿ ನುಡಿದನೆಂದಿದ್ದ ಭೂ
ಭುಜಮಂತ್ರಿಸಖರೆಣಿಸಿದರು ॥ ೨೩

ಇಂತೆಂದು ಪಲಬರು ಯೋಚಿಸುತ್ತಿರೆ ನೃಪ
ನಂತು ಕೇಳ್ ತಮ್ಮ ಬಾಯೂರಿ
ಕುಂತು ನನ್ನದು ತೇಜ ನಿನಗೆಂದ ಮೇಲೆ ಕೋ
ಪಾಂತರವೇನಣ್ಣಯೆಂದ ೨೪

ಕೇಳಣ್ಣ ಚಕ್ರವ ಬಯಸಿತಿಲ್ಲಾನು ಶ
ಸ್ತ್ರಾಲಯದೊಳು ತಾನೆ ಹುಟ್ಟಿ
ಏಳಿಸಿ ನಾಡ ಸುತ್ತಿಸಿತು ನಿಮ್ಮೆಲ್ಲರ
ಆಲಿಗೆ ನೋವಾಗುವಂತೆ ॥ ೨೫

ಈ ಸಿರಿಯನು ನಾನು ಪುಣ್ಯದ ಫಲವೆಂದು
ದಾಸೀನದೊಳು ನೋಡುತ್ತಿಹೆನು
ಆಸೆಯಿಲ್ಲಿನಗೆ ನೀನೊಪ್ಪುಗೊಳ್ ಮುಂದಣ
ಭೂಸುದತೀಶ ನೀನಲ್ತೆ ॥ ೨೬

ಅರಸಾಗಿ ನೀನೂರೊಳಿರ್ದೆ ನೀನಟ್ಟಿದ
ದೊರೆಯಾಗಿ ನಾನೆಯ್ದಿ ನಿನ್ನ
ಧರೆಯ ಸಾಧಿಸಿ ತಂದೆನೊಪ್ಪುಗೊಳ್ ನಿನ್ನ ಭೂ
ವರವೃಂದವಿದೆ ಕಟಕವಿಸ ॥ ೨೭

ನಿನಗೆ ನಾನಣ್ಣನೆಂಬಕ್ಕರವಿಲ್ಲ ನೀ
ನನುಜನೆಂಬಕ್ಕರುಂಟಪ್ಪಾ
ನನೆವಿಲ್ಲ ನಿನ್ನ ಭಾಗ್ಯವ ಕಣ್ತುಂಬ ನೋ
ಳ್ಪೆನು ರಾಜಪದವಿಗಿಂತೊಪ್ಪು ॥ ೨೮

ಕೌಶಲಿಯೊಳು ನೀನು ಸುಖಬಾಳು ನನಗೊಂದು
ದೇಶವ ಕೊಟ್ಟು ಬೇಱಿರಿಸು
ಕ್ಲೇಶದ ಮಾತಲ್ಲ ಸಂತೋಷ ಪುರುಪರ
ಮೇಶನ ಕೆಂಬಜ್ಜೆಯಾಣೆ ॥ ೨೯

ರಂಜನೆಗಾಡಿದ ಮಾತಲ್ಲ ನಂಬು ನಿ
ರಂಜನಸಿದ್ಧನೆ ಸಾಕ್ಷಿ
ಕಂಜಾಸ್ತ್ರ ನನಗಿದಱಿಂದ ಹೆಚ್ಚಿನ ಭಾಷೆ
ಜಂಜಡದಿಚ್ಛೆಗಳಿಲ್ಲ ॥ ೩೦

ವಿರಸವ ಬಿಡು ಬಿಡೆಂದಾ ಚಕ್ರಿ ನುಡಿಯೆ ಪೂ
ಸರನು ತಗ್ಗುತ ಮನಸಿನೊಳು
ಮುರಿದ ಮೋರೆಯೊಳಿರೆ ಚಕ್ರರತ್ನವನಾಗ
ಕರೆದಿಂತು ನುಡಿದನಾ ಚಕ್ರಿ ॥ ೩೧

ಹೋಗು ಚಕ್ರವೆ ಭುಜಬಲಿಯನೋಲೈಸೆನೆ
ಹೋಗದೀತಗೆ ಪುಣ್ಯವುಂಟು
ಪೂಗಣೆಯಗೆ ಚಕ್ರ ಬೆಸಗೆಯ್ವ ಪುಣ್ಯವಿ
ಲ್ಲಾಗಿ ನಿಂದಿತು ಮುಂದೆ ಬಂದು ॥ ೩೨

ಎಲೆಲೆ ಪಿಶಾಚ ಹೋಗೆಂದರೇತಕೆ ಹೋಗೆ
ಕಲಹ ನಿನ್ನಿಂದಾದುದೆನಗೆ
ಜಲಜಾಸ್ತ್ರನತ್ತ ಸಾರೆಂದು ನೂಕಿದರದು
ಬಳೆ ಜಾಱುವಂತೆ ಜಾಱಿದುದು ॥ ೩೩

ಕಳೆಗುಂದಿ ಕಾಮನ ಭುಜಸರಿತದೊಳತ್ತ
ತೊಲಗಿ ನಿಂದಿತು ಚಕ್ರರತ್ನ
ದಳ ನಡುಗಿತು ಧೂಮಕೇತುವೆದ್ದುವು ಕೂಡೆ
ನೆಲ ಗುಡುಗಿತು ಘುಡುಘುಡನೆ ॥ ೨೪

ಸತ್ಪುರುಷಗೆ ಜ್ಯೇಷ್ಠಗುಂಬಳಿಯೆಂದು ಜ
ಗತ್ಪದ ಕಿಱಿಯನಿಗೆನಲು
ಸತ್ಪಥ ತಪ್ಪಿ ಕಾಪಥ ಹುಟ್ಟುವಾಗ ಮ
ಹೋತ್ಪಾತ ಹುಟ್ಟಿದೆ ಜಗಕೆ ॥ ೨೫

ಗರುಡಮಂತ್ರಕೆ ವಿಷವಿಳಿವಂತೆ ಭರತಭೂ
ವರನ ವಾಕ್ಯವ ಕೇಳಲಾಗಿ
ಜರಿಜರಿದಂಗಜಗೆತ್ತಿದ ಕೋಪ ಪೈ
ಸರಿಸಿತು ಹೃದಯ ತಂಪಾಯ್ತು ॥ ೨೬

ಏಱಿದ ಹೆಡೆಯಿಳಿವಂತೆ ಮುನ್ನಿನ ಗರ್ವ
ಜಾಱಿತು ಮೃದುವಾಯ್ತು ಚಿತ್ತ
ಗಾಱಾಯ್ತು ಕಾರ್ಯ ನನ್ನಣ್ಣನಿಗಿದಿರಾಗಿ
ದೂಱ ಹೊತ್ತೆನಲಾ ಹಾಯೆಂದ ॥ ೨೭

ಒಲಿದ ಮೋರೆಯ ತಿರುಹಿದನು ಸಮ್ಮುಖವಾಗಿ
ಕಳೆದನೊಯ್ಯನೆ ತೋಳ ತೊಡಕ
ಅಳುಕಾದುದಣ್ಣನ ಮೊಗವ ನೋಡದೆ ನಾಚಿ
ತಲೆಗುಸಿದಿರ್ದನಾ ಮದನ ॥ ೨೮

ಕಡೆಯ ಯುದ್ಧದೊಳಲ್ಲದಿವರುಕ್ಕು ನಿಲ್ಲದೆಂ
ದಿಡಿಕಿಱಿದೀಕ್ಷಿಸುತಿರ್ದು
ನುಡಿಯೊಳೆ ಚಕ್ರಿ ಗೆಲ್ದುದ ಕಂಡು ಪೊಗಳ್ದರು
ನುಡಿಯದೆ ಸಖಮಂತ್ರಿನೃಪರು ॥ ೩೯

ಕಾವನುಗ್ರತೆಯೆತ್ತ ಶಾಂತದೊಳೆಯ್ದಿ ವಾ
ಕ್ಯಾವಲಂಬದಿ ಗೆಲ್ದುದೆತ್ತ
ಆವಂಗದೊಳು ಚಕ್ರಿಗೆಣೆಯುಂಟೆ ಎಂದು ಜ
ನಾವಳಿ ಪೊಗಳ್ದುದೆದೆಯೊಳು ॥ ೪೦

ನುಡಿವ ಗಂಭೀರ ಬೋಧಿಪ ಬೋಧೆ ತಮ್ಮನೆಂ
ದೊಡಕುಹುಟ್ಟಿಸದೊಂದು ಪ್ರೀತಿ
ತೊಡರದ ಮಾತಿಂದ ಗೆಲ್ದ ಚಾತುರ್ಯಕೆ
ಪಡೆಯೆಲ್ಲ ಮೆಚ್ಚಿ ಕೀರ್ತಿಸಿತು ॥ ೪೧

# ಟಿಪ್ಪಣಿ

## ೧. ಬಸವಣ್ಣನವರು : ' ವಚನಗಳು '

ಭಕ್ತಿಭಾಂಡಾರಿ ಬಸವಣ್ಣನವರು ಕಲ್ಯಾಣ ಪಟ್ಟಣದಲ್ಲಿ ರಾಜ್ಯ ವಾಳಿದ ಬಿಜ್ಜಳನ ಮುಖ್ಯಮಂತ್ರಿಯಾಗಿದ್ದರು. ಇವರ ಕಾಲ ಕ್ರಿ. ಶ. ಸು. ೧೧೬೦. ಇವರು ಷಟ್‌ಸ್ಥಲದ ವಚನಗಳು, ಶಿಖಾ ರತ್ನವಚನ, ಕಾಲಜ್ಞಾನವಚನ, ಮಂತ್ರಗೋಪ್ಯ ಮೊದಲಾದುವನ್ನು ರಚಿಸಿದ್ದಾರೆ

ಇಲ್ಲಿಯ ವಚನಗಳನ್ನು ಷಟ್‌ಸ್ಥಲದ ವಚನಗಳಿಂದ ಆಯ್ದು ಕೊಳ್ಳಲಾಗಿದೆ. ಹೃದಯದ ಆಳದಿಂದ ಬಂದ ಈ ವಚನಗಳು ಬಸವಣ್ಣನವರ ವ್ಯಕ್ತಿತ್ವದ ವಿಕಾಸವನ್ನು ಸೂಚ್ಯವಾಗಿ ರೇಖಿಸುತ್ತವೆ.

ವಚನ ೧—೫ : ತವರಾಜ-ಒಂದು ಬಗೆಯ ಸಕ್ಕರೆ. ಹುಯ್ಯಲು-ಮೊರೆ, ಆರ್ತನಾದ. ಅಂದಣ-ಪಲ್ಲಕ್ಕಿ. ಸೊಣಗ-ನಾಯಿ

೬—೧೦ . ತೊಡಿಗೆ-ಆಭರಣ. ನಿಧಾನ-ನಿಧಿ. ಬಂತರ-ಒಂದು ಬಗೆಯ ಪಿಶಾಚಿ.

೧೧—೧೫ . ಹೊಲಬಿಗ-ಸರಿಯಾದ ದಾರಿಯಲ್ಲಿರುವವನು. ಕಮ್ಮಟ-ಟಂಕಸಾಲೆ. ಏಡಿಸು-ಅಣಕಿಸು.

೧೬—೨೦ ದಿಬ್ಯ-ದಿವ್ಯಪ್ರಮಾಣಮಾಡಲು ಹಿಡಿದು ಕೊಳ್ಳುವ ಕಾಸಿದ ಕಬ್ಬಿಣ ಮೊದಲಾದ ವಸ್ತು. ಪುರಾತರು-ಪುರಾತನರು, ಹಿಂದಿನ ಶಿವಶರಣರು.

೨೧—೨೫ ' ಸಮಯಾಚಾರಿ-ಆಚಾರ್ಯಪುರುಷ ಹೊಗಳತೆ-ಹೊಗಳಿಕೆ ಇಮ್ಮೆಯ್-ಎರಡೂ ಮಗ್ಗುಲು. ಸುರಗಿ-ಸಣ್ಣ ಕತ್ತಿ ಜೂಬು-ಭಯಹುಟ್ಟಿಸುವ ವಸ್ತು.

೨೬—೩೧ ಅವುಟು-ಮೂರುವರೆ. ದಂಡಿಗೆ-ವೀಣೆ ನಿಷ್ಪತ್ತಿ-ಕೊನೆಯ ಪರಿಣಾಮ, ಪರಿಪಾಕ.

## ೨. ಹರಿಹರ : ' ಪುಷ್ಪರಗಳೆ '

ಹರಿಹರನ ಕಾಲದ ವಿಷಯವಾಗಿ ಪಂಡಿತರಲ್ಲಿ ಭಿನ್ನಾಭಿಪ್ರಾಯವಿದೆ ಈತನು ಕ್ರಿ. ಶ ೧೨೦೦ ರ ಸುಮಾರು ಇದ್ದನೆಂದು ಇಟ್ಟು ಕೊಳ್ಳಬಹುದು. " ಪರಮಾನಂದಾಬ್ಧಿ ಪಂಪಾಪುರದರಸ ವಿರೂಪಾಕ್ಷಸಾಕ್ಷಾತ್‌ಸುಪುತ್ರಂ" ಎಂದು ಹೇಳಿಕೊಂಡಿರುವ ಈತನು ಹಂಪೆಯ ವಿರೂಪಾಕ್ಷನ ಪರಮಭಕ್ತನಾಗಿದ್ದನು. ಈತನು ಗಿರಿಜಾ ಕಲ್ಯಾಣವೆಂಬ ಚಂಪೂಕಾವ್ಯವನ್ನೂ, ನೂರಕ್ಕೆ ಹೆಚ್ಚಿನ ಶಿವಗಣದ ರಗಳೆಗಳನ್ನೂ, ರಕ್ಷಾಶತಕ ಪಂಪಾಶತಕ ಮುಡಿಗೆಯ ಅಷ್ಟಕ ಮುಂತಾದ ಕೃತಿಗಳನ್ನೂ ರಚಿಸಿದ್ದಾನೆ

ಪಂಪಾವಿರೂಪಾಕ್ಷನ ಪೂಜೆಗಾಗಿ ಹೂಗಳನ್ನು ಎತ್ತಿತಂದು ಅರ್ಪಿಸುವ ಸಂಭ್ರಮದ ಸನ್ನಿವೇಶವನ್ನು ಕವಿ ಈ ರಗಳೆಯಲ್ಲಿ ಭಕ್ತ್ಯತಿಶಯದಿಂದ ಬಣ್ಣಿಸಿದ್ದಾನೆ.

ಪಂಕ್ತಿ ೧—೫೦ . ಒಸರು-ಸ್ರವಿಸು. ಹರವರಿಯ-ವಿಶಾಲವಾದ. ಕರಡಗೆ-ಸಂಪುಟ. ಕೈವಾರಿಸು-ಹೊಗಳು. ಸೌರಭ-ಸುವಾಸನೆ. ಉರವಣಿಸು-ಅಧಿಕವಾಗು. ಅಡ್ಡಮುಂ ತಿಗಟಮುಂ-

ಅಡ್ಡವಾಗಿ ಮತ್ತು ತ್ರಿಕೋಣಾಕಾರವಾಗಿ ಉಗ್ಗಡಸು-ಘೋಷಿಸು. ಬೆಲ್ಲವತ್ತ-ಬಿಲ್ವಪತ್ರ. ಮುಂಗುಡಿ-ಮುಂಭಾಗ ಕರದಿಂ-ಅತಿಶಯ ವಾಗಿ. ತೊನೆ-ಒಲೆದಾಡು. ಕುಕಿಲಿಱ್-ಕೂಕೂ ಎಂದು ಕೂಗು.

೫೧—೧೦೦ ಅಳಿಮನ- (೧) ಹೀನಮನಸ್ಸು, (೨) ತುಂಬಿಯ ಮನಸ್ಸು ಕಣ್ಣುಂಗತಿ-ಸರ್ವಸ್ವ ತಿಱ್-ಕೊಯ್ಯು. ಅದಿರ್ಗಂತಿ-ಮಾಧವೀಲತೆ. ಜಾತಿ- (೧) ಜಾಜಿ- (೨) ಕುಲ. ಹೆಱೆಸೂಡಿದನ-ಚಂದ್ರಶೇಖರನ ಪಡ್ಡಳಿ-ಕಣಗಿಲೆ ಹೇರೀಳೆ-ದೊಡ್ಡಿ ಕಾಯ ಗಿಡ. ಮುಡಿವಾಳ-ಬಾಳದ ಬೇರು.

೧೦೧—೧೫೦ ಕೊನರ್-ಚಿಗುರು. ಸೋಮಯ್ಯ-ಸೌರಾಷ್ಟ್ರದ ಸೋಮನಾಥ. ಪುಲಿಗೆಱೆ-ಈಗಿನ ಲಕ್ಷ್ಮೇಶ್ವರ ಏವೆನೋ-ಏನುಮಾಡಲಿ. ನೇತ್ರ-ವಸ್ತ್ರ. ಸಾಗಿಸು-ಪೋಷಿಸು. ಪೊಂಗು-ಉಬ್ಬು ಬೀಗು-ಉಬ್ಬು ಒಕ್ಕಲಿಕ್ಕು-ಧ್ವಂಸಮಾಡು. ಚಲ-ಹರ.

೧೫೧—೨೦೦ ಪಲ್ಮೊರೆ-ಹಲ್ಲುಮಸೆ. ಹಂಪೆಯರಸನ ಕುಮಾರಂ-ಇಲ್ಲಿ ಹರಿಹರ. ಸಿತಗ-ದುಷ್ಟ. ಆಱಿಡಿ- (೧) ತುಂಬಿ, (೨) ಹಿಂಸೆ. ಗಳಗಳನೆ-ಶೀಘ್ರವಾಗಿ. ಎಬ್ಬಟ್ಟು-ಓಡಿಸು. ಉಪ್ಪ ವಡಿಸು-ಎಚ್ಚರಗೊಂಡು ಏಳು. ತಳುವು-ತಡಮಾಡು. ಗಂಧವಹ-ವಾಯು ಕೂಪಿಱ್-ರಕ್ಷೆಗಾಗಿ ಊದು. ಸಪಿನೆ-ನೇರವಾಗಿ. ತುಱುಬು-ಮುಡಿಸು ಅಣ್ಪಿಕ್ಕು-ಲೇಪಿಸು. ಜಾದಿ-ಜಾಜಿ. ಪೂವಲಿ-ಪುಷ್ಪೋಪಹಾರ, ಸವಱು-ಸರಿಪಡಿಸು ಸೀಗುರಿ-ಒಂದು ಬಗೆಯ ಚಾಮರ.

೨೦೧—೨೫೦ · ಆರೋಗಿಸು-ಭೋಜನಮಾಡು, ಹೆಱಸಾರ್-ಹಿಂದಕ್ಕೆ ಹೋಗು. ಎಯ್ದು ಸು-ತೃಪ್ತಿಪಡೆ. ಓಜೆ-ಕ್ರಮ. ಹಳ ವಿಸು ಪ್ರಲಾಪಿಸು.. ಗಳಪು-ಹರಟು. ಪಡಿ-ಪ್ರತಿ ಪರುಷ-ಸ್ಪರ್ಶ ಶಿಲೆ, ಮುಟ್ಟಿದ್ದನ್ನು ಚಿನ್ನವಾಗಿಸುವ ಮಣಿ. ಸುರಭಿ-ಕಾಮ

ಧೇನು. ಇಡುಕು-ಬಿಡು. ಅಕ್ಕಾಡು-ಕೋನೆಮುಟ್ಟು. ನಾಲ್ಕಕ್ಕರಂ-ವಿರೂಪಾಕ್ಷ ಎಂಬ ಅಕ್ಷರಗಳು ಒಚ್ಚತ-ಒಂದೇ ಸಮ

೨೫೧—೨೬೨ ಬೋಳೆಯರ್-ದೇವತೆಗಳು ಹೆಂಪಿಡಿದ-ಹಿರಿಮೆಯಿಂದ ಕೂಡಿದ

ಅಕ್ಷಮಂ - ಅಸಮರ್ಥ. ಅಳಿಪಂ - ಲಾಲಸೆಯುಳ್ಳವನು ಮಾಯಾಪಕ್ಷಂ-ಮಾಯೆಯ ಸಂಬಂಧವುಳ್ಳವನು.

## ೩. ರಾಘವಾಂಕ : 'ಚಂದ್ರಮತಿಯ ಪ್ರಲಾಪ'

ರಾಘವಾಂಕನು ಹರಿಹರದೇವನ ಸೋದರಳಿಯ ಮತ್ತು ಶಿಷ್ಯ ಈತನ ಕಾಲವೂ ಕ್ರಿ ಶ. ಸುಮಾರು ೧೨೦೦ ಎಂದು ಹೇಳಬಹುದು. ಈತನು ಷಟ್ಪದೀಸಂಪ್ರದಾಯದ ಪ್ರವರ್ತಕನೆಂದು ಹೆಸರಾಗಿದ್ದಾನೆ. ಹರಿಶ್ಚಂದ್ರಕಾವ್ಯ, ಸಿದ್ಧರಾಮಚಾರಿತ್ರ, ಸೋಮನಾಥಚರಿತೆ, ವೀರೇಶ ಚರಿತೆ, ಶರಭಚಾರಿತ್ರ, ಹರಿಹರಮಹತ್ವ ಇವು ಈತನ ಕೃತಿಗಳು. ಹರಿಹರನಂತೆ ಈತನೂ ಪಂಪಾವಿರೂಪಾಕ್ಷನ ನಿಸ್ಸೀಮಭಕ್ತ.

ಈ ಕಾವ್ಯಭಾಗವನ್ನು ಹರಿಶ್ಚಂದ್ರಕಾವ್ಯದಿಂದ ತೆಗೆದು ಕೊಂಡಿದೆ. ಹರಿಶ್ಚಂದ್ರನು ವಿಶ್ವಾಮಿತ್ರನಿಗೆ ರಾಜ್ಯವನ್ನು ಒಪ್ಪಿಸಿ, ಕಾಶಿಯಲ್ಲಿ ತನ್ನ ಹೆಂಡತಿ ಚಂದ್ರಮತಿಯನ್ನೂ ಮಗ ಲೋಹಿತಾಶ್ವ ನನ್ನೂ ಮಾರಿ, ತಾನು ಹೊಲೆಯನಿಗೆ ಆಳಾಗಿ ಸ್ಮಶಾನವನ್ನು ಕಾದು ಕೊಂಡಿರುತ್ತಾನೆ ಕಾಡಿನಲ್ಲಿ ಹಾವು ಕಡಿದು ಲೋಹಿತಾಶ್ವನು ಮರಣ ಹೊಂದಿದುದು, ಚಂದ್ರಮತಿ ಶವವನ್ನು ಕಂಡುದುದು, ಕೊನೆಯ ಸಂಸ್ಕಾರಕ್ಕಾಗಿ ಶವವನ್ನು ಸುಡುಗಾಡಿಗೆ ಒಯ್ದಾಗ ಅಲ್ಲಿ ಹರಿ ಶ್ಚಂದ್ರನು ವರ್ತಿಸಿದುದು ಇವು ಈ ಕಾವ್ಯಭಾಗದಲ್ಲಿ ಕರುಣರಸ ಭರಿತವಾಗಿ ನಿರೂಪಿತವಾಗಿವೆ.

ಪದ್ಯ ೧—೫ : ಒತ್ತಿಟ್ಟ-ಒತ್ತೆಯಿಟ್ಟ ಸೂನೆಗಾಱ-ಕಟುಕ ಮಾಡ-ಉಪ್ಪರಿಗೆ. ಹೇಳಿಗೆ-ಬುಟ್ಟಿ. ಬಾಣಸ-ಅಡಿಗೆಯ ಮನೆ. ಹಂತಿ-ಪಂಕ್ತಿ. ಮೂರಿ-ಬಾಯಿ. ಆಱ್-ಸಮರ್ಥವಾಗು. ಓರಂತೆ-ಒಂದೇ ಸವನೆ ಸಲಬೇಹುದು-ಸಲ್ಲಬೇಕು. ಆರಯ್ಕೆ-ವಿಚಾರ. ಹುಲುಹುಳ್ಳಿ-ಹುಲ್ಲು ಕಟ್ಟಿಗೆ. ಅಡುಗಬ್ಬು-ಉರುವಲು.

೬—೧೦ : ಹದರು-ಕೈಯ ಮಣಿಕಟ್ಟು, ಹದಡು. ತತ್ತುಕ-ಜೊತೆಗಾರ (?). ಉಮ್ಮಳ-ವ್ಯಥೆ. ದಟ್ಟಿಸು-ಗದರಿಸು ಅದ್ದನೊ-ಮುಳುಗಿದನೊ ಹೊಡಕರಿಸು-ಪ್ರಜ್ವಲಿಸು.

೧೧—೧೫ ಭಲ್ಲುಕ-ಕರಡಿ. ಚಚ್ಚರ-ಲಗುಬಗೆ. ಮಡಲಿಱ್-ಹಬ್ಬು. ಕಾಳ-ಕತ್ತಲೆ.

೧೬—೨೦ . ಅಗುರ್ವಿಸು-ಭಯಪಡಿಸು ಮುರಿದ-ತಿರುಹಿದ. ಬಱತ-ಒಣಗಿದ, ಆರಿದ. ಕಡಗು-ಉತ್ಸಾಹಗೊಳ್ಳು, ಉಬ್ಬು. ಹಡಿಗೆತ್ತುದು-ಬಂಗಿಲು ಮುಚ್ಚಿತು. ಕರಕರಿಸು-ಪೀಡಿಸು ಪರಿಣಾಮ-ಸಮಾಧಾನ.

೨೧—೨೫ : ನನ್ನಿಕಾಱ-ಸತ್ಯನಿಷ್ಠ. ಪಡಲಿಡು-ಚೆದರಿ ಬೀಳು. ಕಾಳಿಜ-ಹೃದಯಪಿಂಡ. ಸಿದುಗು-ಕೈಯಿಟ್ಟು ಹುಡುಕು. ಪಟ್ಟಿರಿಸು-ಮಲಗಿಸು. ಮುಟ್ಟಿಗೆ-ಚಿತೆ (?). ಹಾಗ ಒಂದು ಅಲ್ಪ ನಾಣ್ಯ.

೩೬—೪೦ : ಐದೆ-ಮುತ್ತೈದೆ ನೆಲದೆಱೆ-ಭೂಮಿಯ ಬಾಡಿಗೆ. ಹಾಳಂ ಬಿಡು- ಭೂಮಿಯನ್ನು ದತ್ತಿಯಾಗಿ ಬಿಟ್ಟುಕೊಡು.

೪೧—೪೫ : ಸಿಗ್ಗು-ನಾಚಿಕೆ. ಹೇವರಿಸು-ಅಸಹ್ಯಪಡು, ಹಿಂದೆಗೆ. ತೂಕದ ಕೋಲ ತೊಲೆ-ತಕ್ಕಡಿಯ ದಂಡಿಗೆ.

೩೭—೪೧. ಗರುವಿಕೆ-ಹಿರಿಮೆ. ಗಾಡಿ-ಸೌಂದರ್ಯ ಒಟ್ಟಜೆ-ಪರಾಕ್ರಮ. ಎಡೆವಟ್ಟೆ-ಮಧ್ಯಮಾರ್ಗ.

## ೪. ಕುಮಾರವ್ಯಾಸ : ' ಕರ್ಣನ ಸತ್ವಪರೀಕ್ಷೆ '

ಕುಮಾರವ್ಯಾಸನ ನಿಜವಾದ ಹೆಸರು ನಾರಣಪ್ಪ. ಈತನ ಕೃತಿ ' ಕರ್ನಾಟಕಭಾರತಮಂಜರಿ ', ಇದನ್ನು ' ಗದುಗಿನ ಭಾರತ ' ಅಥವಾ ' ಕನ್ನಡ ಭಾರತ ' ವೆಂದು ಕರೆಯುವುದೇ ರೂಢಿಯಾಗಿದೆ. ಕುಮಾರವ್ಯಾಸನ ಕಾಲ ಯಾವುದೆಂಬುದು ಸರಿಯಾಗಿ ತಿಳಿದಿಲ್ಲ. ಈತನು ಕ್ರಿ ಶ ೧೫ನೆಯ ಶತಮಾನದ ಪೂರ್ವಭಾಗದಲ್ಲಿ ಇದ್ದಿರ ಬೇಕೆಂದು ವಿದ್ವಾಂಸರ ಸಾಮಾನ್ಯಾಭಿಪ್ರಾಯ. ಈತನ ಜನ್ಮಸ್ಥಳ ಧಾರವಾಡ ಜಿಲ್ಲೆಯ ಕೋಳಿವಾಡ, ಆರಾಧ್ಯದೇವತೆ ಗದುಗಿನ ವೀರನಾರಾಯಣಸ್ವಾಮಿ.

ಇಲ್ಲಿಯ ಕಾವ್ಯಭಾಗವನ್ನು ಭಾರತದ ಉದ್ಯೋಗಪರ್ವದಿಂದ ಆಯ್ದುಕೊಂಡಿದೆ. ಪಾಂಡವರ ಅಜ್ಞಾತವಾಸವು ಮುಗಿದಬಳಿಕ ಅವರಿಗೆ ಕೌರವನಿಂದ ಅರ್ಧರಾಜ್ಯವನ್ನು ಕೊಡಿಸುವ ಸಂಧಾನಕ್ಕಾಗಿ ಕೃಷ್ಣನು ಹಸ್ತಿನಾವತಿಗೆ ಬಂದನು. ಸಂಧಿಪ್ರಯತ್ನವು ವಿಫಲವಾಯಿತು. ಕೃಷ್ಣನು ಹಿಂದಿರುಗುವಾಗ ಕರ್ಣನ ಬಳಿಗೆ ಬಂದು ಅವನನ್ನು ತನ್ನೊಡನೆ ರಥದಲ್ಲಿ ಸ್ವಲ್ಪದೂರ ಕರೆದುಕೊಂಡು ಹೋಗುತ್ತಾನೆ ಆಗ ಏನು ಮಾತು ನಡೆಯಿತು, ಆ ಸತ್ವಪರೀಕ್ಷೆಯಲ್ಲಿ ಕರ್ಣನ ಧೀರೋದಾತ್ತತೆ ಹೇಗೆ ಪ್ರಕಾಶಗೊಂಡಿತು, ಆ ಬಳಿಕ ಹೆತ್ತತಾಯಿ ಕುಂತಿ ತನ್ನನ್ನು ಮೊದಲ ಬಾರಿ ಕಂಡಾಗ ಕರ್ಣನು ಹೇಗೆ ವರ್ತಿಸಿದನು ಎಂಬ ವಸ್ತು ಈ ಪದ್ಯಭಾಗದಲ್ಲಿ ಮನಮುಟ್ಟುವಂತೆ ನಿರೂಪಿತವಾಗಿದೆ.

ಸೂಚನೆ ಅದಟ-ಶೂರ. ಅತುಳ-ಎಣ್ಣೆಯಿಲ್ಲದ. ದಿನ ಮಣಿಯಮಗ-ಸೂರ್ಯಪುತ್ರ, ಕರ್ಣ

ಪದ್ಯ ೧—೫ ಶೌರಿ-ಕೃಷ್ಣ. ಸಂವಾದಿಸು-ಹೋಲಿಸಿ ನೋಡು. ಅಂಜುಳಿ-ಅಂಜಲಿ, ಬೊಗಸೆ. ತಳಕಿಕ್ಕು-ತಳಕುಹಾಕು.

೬—೧೦ ನಿಧಾನ-ನಿಶ್ಚಯ (?) ಹಸಾದ-ಪ್ರಸಾದ.

೧೧—೧೫ : ಸೆರೆ - ರಕ್ತನಾಳ ದೃಗುಜಲ - ಕಣ್ಣೀರು. ದುಮ್ಮಾನ-ಮನಸ್ಸಿನ ವಿಷಮಸ್ಥಿತಿ. ದಾತಾರ-ದಾನಿ ಅರಿ-ಕತ್ತರಿಸು. ಅಡಗು-ಮಾಂಸ.

೧೬—೨೦ . ಸೊಗಸು-ಮೆಚ್ಚು. ರೂಢಿ-ಲೋಕ. ಹರಿಬ-ಪ್ರತೀಕಾರಕ್ರಿಯೆ. ಕೈವಾರ-ಹೊಗಳಿಕೆ. ಅರುಣಜಲ-ರಕ್ತ. ಆಜ್ಯ-ತುಪ್ಪ. ಚರು-ಹವಿಸ್ಸು. ಸಮಿಧೆ-ಕಟ್ಟಿಗೆ, ಕಪಾಲ-ತಲೆಬುರುಡೆ. ನಿಡುತೆರಳೆಗಳ-ಉದ್ದವಾದ ಮತ್ತು ಒತ್ತುಗೂಡಿಸಿದ ಆಹವ-ಯುದ್ಧ. ಪತಿಯ ಅವಸರ-ಸ್ವಾಮಿಕಾರ್ಯ.

೨೧—೨೫ : ಖತಿ-ಕೋಪ. ಒಡ್ಡೈಸು-ಹೂಡು, ಮುಂದಿಡು. ಸಂಪ್ರತಿ-ಸಂಧಿ. ಸಂಗರ-ಯುದ್ಧ. ವಿಸಸನ ಕೊಲೆ, ಯುದ್ಧ. ಮಂತ್ರ-ಮಂತ್ರಾಲೋಚನೆ. ನುಸುಳು-ಹೀನತ್ವ. ಹುಲುಸರವಿ-ಹುಲ್ಲಿನ ಹಗ್ಗ. ಹಿಸುಣ-ಚಾಡಿಕೋರ. ಬೇರ್ವರಿ-ಬೇರೂರಿ ಹರಡು. ಕಾಳುಮಾಡು-ವ್ಯರ್ಥಮಾಡು.

೨೬—೩೦ : ತಾತ-ತನ್ನ ತಂದೆಯಾದ ಸೂರ್ಯ. ಸೌರ-ಮಂತ್ರ-ಸೂರ್ಯಮಂತ್ರ. ಔದಾರಿಯದ ಸುರತರು-ಉದಾರತೆಯಲ್ಲಿ ಕಲ್ಪವೃಕ್ಷ,ಎಂದರೆ ಕರ್ಣ. ಅದ್ದಳು-ಮುಳುಗಿದಳು. ಕೈಲಿಡೆ-

ನ್ಯಾಸ, ಸುರಕ್ಷಣೆಗಾಗಿ ಒಪ್ಪಿಸಿದ್ದು. ವಾಸಿ-ಪ್ರತಿಜ್ಞೆ. ಎಕ್ಕಟಿ-ಪ್ರತ್ಯೇಕವಾಗಿ. ಒಸೆ-ಪ್ರೀತಿಸು.

೪೧—೪೫ ವಿಗಡತನ-ಪ್ರತಿಕೂಲತ್ವ, ಕೆಡುಕತನ. ಮಾಣು-ನಿಲ್ಲಿಸು. ಪರರೋಲಗ-ಪರರ ಸೇವೆ. ಕಾಯಜನ ಪಿತ-ಮನ್ಮಥನ ತಂದೆ,ಕೃಷ್ಣ. ಒಕ್ಕತನ-ಕೂಡಿ ಬಾಳುವುದು. ಮಾದು ಕಳೆ-ಬಿಟ್ಟುಬಿಡು

## ೫. ರತ್ನಾಕರ : 'ಭರತವಿಜಯ'

ರತ್ನಾಕರವರ್ಣಿಯ ಕಾಲ ಕ್ರಿ. ಶ ೧೫೫೭ ಎಂದು ತಿಳಿದು ಬರುತ್ತದೆ ಈತನು ಭರತೇಶವೈಭವ, ತ್ರಿಲೋಕಶತಕ, ಅಪರಾಜಿತೇಶ್ವರಶತಕ ಮೊದಲಾದ ಕೃತಿಗಳನ್ನು ರಚಿಸಿದ್ದಾನೆ.

ಈ ಪದ್ಯಭಾಗವನ್ನು ಭರತೇಶವೈಭವದ 'ದಿಗ್ವಿಜಯ ಕಲ್ಯಾಣ'ವೆಂಬ ವಿಭಾಗದಿಂದ ಆರಿಸಿಕೊಂಡಿದೆ ಜೈನರ ಪ್ರಥಮತೀರ್ಥಕಂರನಾದ ಪುರಪರಮೇಶ್ವರನ ಹಿರಿಯ ಮಗ ಭರತೇಶ್ವರನು ದಿಗ್ವಿಜಯ ಮುಗಿಸಿಕೊಂಡು ಹಿಂದಕ್ಕೆ ಬರುವಾಗ ದಾರಿಯಲ್ಲಿ ಅವನ ತಮ್ಮನೂ ಆ ಯುಗದ ಕಾಮದೇವನೂ ಆದ ಬಾಹುಬಲಿಯ ರಾಜಧಾನಿ ಪೌದನಪುರದ ಬಳಿ ಅವನ ಚಕ್ರಾಯುಧವು ಮುಂದೆ ನಡೆಯದೆ ತಡೆದು ನಿಲ್ಲುತ್ತದೆ. ಚಕ್ರವರ್ತಿಗೆ ತಲೆಬಾಗದಿರುವವರ ಭೂಮಿಯಲ್ಲಿ ಹೀಗಾಗುವುದೆಂದು ಬಲ್ಲವರಿಂದ ತಿಳಿದು, ತನ್ನನ್ನು ಬಂದು ಕಾಣಬೇಕೆಂದು ಭರತನು ತಮ್ಮನಿಗೆ ಹೇಳಿಕಳಿಸುತ್ತಾನೆ. ಅಣ್ಣನ ಮಾತನ್ನು ಬಾಹುಬಲಿ ಅಲ್ಲಗಳೆದು, ಅವನನ್ನು ಎದುರಿಸಿ ನಿಲ್ಲುತ್ತಾನೆ. ಆಗ ಮಂತ್ರಿಗಳು ದೃಷ್ಟಿಯುದ್ಧ, ಜಲಯುದ್ಧ, ಮುಷ್ಟಿಯುದ್ಧ ಈ ಮೂರೂ ನಿಮ್ಮಿಬ್ಬರಿಗೆ ಮಾತ್ರ ನಡೆಯಲಿ ಎಂದು ಸೂಚಿಸುತ್ತಾರೆ. ಅದನ್ನು ಭರತಬಾಹುಬಲಿಗಳು ಒಪ್ಪಿ, ಒಬ್ಬರ ಮುಂದೆ ಒಬ್ಬರು ನಿಂತಾಗ, ಭರತನು ತಮ್ಮನ ಮೇಲಿನ ಪ್ರೀತಿಯಿಂದ ಪ್ರೇರಿತನಾಗಿ

ಅವನೊಡನೆ ಹೋರಾಡಲೊಲ್ಲದೆ ತಾನಾಗಿ ಸೋಲನ್ನು ಮೊದಲೇ ಒಪ್ಪಿಕೊಂಡು ತನ್ನ ಮಾತಿನಿಂದಲೇ ಬಾಹುಬಲಿಯ ಹೃದಯವನ್ನು ಹೇಗೆ ಗೆಲ್ಲುತ್ತಾನೆಂಬುದನ್ನು ರತ್ನಾಕರನು ಭರತನ ಗುಣಾತಿಶಯವು ಎದ್ದುತೋರುವಂತೆ ಹೊಸ ರೀತಿಯಲ್ಲಿ ನಿರೂಪಿಸಿದ್ದಾನೆ.

೧—೫ ಕುಂದಣದ ಅದ್ರಿ-ಚಿನ್ನದ ಬೆಟ್ಟ. ಕಳ-ಯುದ್ಧ ಕ್ಷೇತ್ರ. ಆಯತ-ವಿಸ್ತಾರವಾದ. ಕೀಱಿ-ಆಗ್ರಹಗೊಂಡು. ಚಕ್ರಿ-ಚಕ್ರವರ್ತಿ, ಭರತ ಚಕ್ರವರ್ತಿ. ಅಂಗಜ-ಮನ್ಮಥ,ಬಾಹುಬಲಿ ಪರಿಕಿಸು-ಪರೀಕ್ಷಿಸು,ನಿಟ್ಟಿಸಿನೋಡು. ಆರಯ್ದು-ವಿಚಾರಮಾಡಿ. ದುರ್ಮನ-ಮನಸ್ಸಿನ ದುಃಸ್ಥಿತಿ

೬—೧೦ ಅಯ್ಯ-(ಇವರ)ತಂದೆ, ಆದಿತೀರ್ಥಂಕರ ಹಾಗ-ಕಾಲುಭಾಗ. ಜಿನಪುತ್ರರು-ಆದಿಜಿನನ ಮಕ್ಕಳು.

೧೧—೧೫ ಒರೆ-ಹೇಳು. ಅಂಕಪದ್ಧತಿ-ಯುದ್ಧದ ರೀತಿ ಭೂಭುಜ-ರಾಜ. ಪೆಂಪು-ಮಹತ್ವ ಒಗೆ-ಉದಿಸು, ಹುಟ್ಟು. ಹಗರಣವಾಡು-ಕೆಳದರ್ಜೆಯ ನಾಟಕದಲ್ಲಿ ಪಾತ್ರವಹಿಸು. ಜಸ-ಕೀರ್ತಿ. ಬದೆಗ-ಕೀಳುಮನುಷ್ಯ.

೧೬—೨೦ : ತರಹರಗೊಳ್ಳು-ಸೈರಿಸಿಕೊಳ್ಳು. ದೃಷ್ಟಿವಿಜಯ-ಒಬ್ಬನು ಇನ್ನೊಬ್ಬನನ್ನು ಎವೆಯಿಕ್ಕದೆ ದೃಷ್ಟಿಸಿ ನೋಡಿ ಗೆಲ್ಲುವುದು. ಪಂಚವಿಶಂತಿಚಾಪ-ಇಪ್ಪತ್ತೈದು ಬಿಲ್ಲಳತೆ ತಿಳಿಪು-ಬೋಧಿಸು. ಚಳಿತು-ಶಕ್ತಿಗುಂದಿ

೨೧—೨೫ · ಅಗುಳಿಪ-ಮುಳುಗಿಸುವ. ಅರ್ಧಶಭಜನೆ-ಅರ್ಧ ವಿಭಾಗ. ಬಾಯಾರೆ-ಬಾಯಿತುಂಬ. ಕುಂತು-ಕುಂದಿತು. ಎಳಿಸಿ-ಎಬ್ಬಿಸಿ ಆಲಿ-ಕಣ್ಣುಗುಡ್ಡೆ.

೩೬—೪೦ ಕೌಶಲಿ-ಭರತನ ರಾಜಧಾನಿ. ಪುರುಪರಮೇಶ-ಆದಿತೀರ್ಥಂಕರ. ಕೆಂಬಜ್ಜೆ-ಕೆಂಪುಬಣ್ಣದ ಹಜ್ಜೆ. ಜಂಜಡ-ಕ್ಲೇಶ

೪೧—೪೫ ಪೂಸರ - ಕುಸುಮಬಾಣ, ಬಾಹುಬಲಿ. ಪೂಗಣೆಯ-ಕುಸುಮಶರ, ಬಾಹುಬಲಿ ಬೆಸಗೆಯ್ವ-ಅಪ್ಪಣೆಯನ್ನು ನಡೆಸುವ ಜಲಚಾಸ್ತ್ರ-ಕಮಲಬಾಣ, ಬಾಹುಬಲಿ. ಭುಜಸರಿತ-ಭುಜದ ನೇರ. ಜಗತ್ಪದ-ಜಗತ್ತಿನ ಆಧಿಪತ್ಯ ಕಾಪಥ-ಕೆಟ್ಟ ದಾರಿ.

೪೬—೫೧ ಪೈಸರಿಸು-ಹಿಂದಕ್ಕೆ ಸರಿ,ಜಾರು. ಗಾಜಿಗಾಯ್ತು-ಕೆಟ್ಟುಹೋಯಿತು. ಇಡಿಕಿಱಿ-ಒತ್ತಾಗಿರು. ಆವಂಗ-ಯಾವ ರೀತಿ.

ಕಡೆಯ ಯುದ್ಧದೊಳಲ್ಲದಿವರುಕ್ಕು ನಿಲ್ಲದೆಂ
ದಿಡಿಕಿಱಿದೀಕ್ಷಿಸುತಿರ್ದು
ನುಡಿಯೊಳೆ ಚಕ್ರಿ ಗೆಲ್ದುದ ಕಂಡು ಪೊಗಳ್ದರು
ನುಡಿಯದೆ ಸಚಿವಮಂತ್ರಿನೃಪರು ॥ ೩೯

ಕಾವನುಗ್ರತೆಯೆತ್ತ ಶಾಂತದೊಳೆಯ್ದಿ ವಾ
ಕ್ಯಾವಲಂಬದಿ ಗೆಲ್ದುದೆತ್ತ
ಆವಂಗದೊಳು ಚಕ್ರಿಗೆಣೆಯುಂಟೆ ಎಂದು ಜ
ನಾವಳಿ ಪೊಗಳ್ದುದೆದೆಯೊಳು ॥ ೪೦

ನುಡಿವ ಗಂಭೀರ ಬೋಧಿಪ ಬೋಧೆ ತನ್ಮನೆಂ
ದೊಡಕುಹುಟ್ಟಿಸದೊಂದು ಪ್ರೀತಿ
ತೊಡರದ ಮಾತಿಂದ ಗೆಲ್ದ ಚಾತುರ್ಯಕೆ
ಪಡೆಯೆಲ್ಲ ಮೆಚ್ಚಿ ಕೀರ್ತಿಸಿತು ॥ ೪೧

## ೭

# ಷಡಕ್ಷರದೇವ : ‘ಮಣಲ ಲಿಂಗದ ಪೂಜೆ’

ಪಳಯಿಸಿದಂ ಪಂಬಲಿಸಿದ
ನೊಳಗಾಱಿದನಾರ್ಪುಗುಂದಿದಂ ಬೇವಸದಿಂ
ಕಳವಳಿಸಿದನಾ ಪರಿಭವ
ದಳುರ್ಕೆಯಿಂ ನೊಂದನಂಡಪಾರ್ಥಂ ಪಾರ್ಥಂ ॥ ೧

ಒಳಗೊಳಗೞಲ್ದು ಚಿಂತಾ
ಕುಳತೆಯನೊಳಕೊಂಡು ಬೇಡನಿವನೆನ್ನಿಂದ
ಗ್ಗಳಿಸಿದನೆ ಮತ್ಪರಾಕ್ರಮ
ಮೊಳಸೋರ್ದುದೆ ಚಿತ್ರಮೆಂದವಂ ಖತಿಗೊಂಡಂ ॥ ೨

ಶಿವಪದಭಕ್ತಿಯಂ ತೊಱೆದೆನೋ ಶಿವನಿಂದೆಯನೆಯ್ದೆ ಕೇಳ್ದೆನೋ
ಶಿವನಿಜಭಕ್ತರಂ ಪೞಿದೆನೋ ಶಿವಪೂಜೆಯ ಗೆಯ್ಯದನ್ನಮಂ
ಸವಿದೆನೊ ಶೈವಸುವ್ರತಮನಾಳ್ದೆಡೆವಿಟ್ಟೆನೊ ಪೂರ್ವಜನ್ಮದೊಳ್
ಶಿವ ಶಿವ ತಾನದಲ್ಲದೊಡೆ ಸಾರ್ಗುಮೆ ಸಂದೆನಗೀ ಪರಾಭವಂ ॥ ೩

ಎಲ್ಲಂದದಿನಾಹವದೊಳ್
ಗೆಲ್ಲಂ ಶಬರಂಗೆ ಸೋಲಮೆನಗಾಯ್ತುಕಟ
ನ್ನೆಲ್ಲಿಯದು ವಿಜಯನಾಮಸ
ಮುಲ್ಲಸಿತಖ್ಯಾತಿಯೆಂದು ಬಿಸುಸುಯ್ವುತ್ತಂ ॥ ೪

ಜಗದೇಕವೀರಶಬ್ದಂ
ನಗೆಗೆಡೆಯಾಯ್ತೆನಗೆ ಪರ್ಬಿದತ್ತೆಣ್ದೆಸೆಯೊಳ್
ನೆಗಟ್ದಪಯಶಮೀ ಶಬರನಿ
ನೊಗೆದ ಪರಾಭೂತಿವೆತ್ತ ಕಾರಣದಿಂದಂ ॥ ೫

ಎತ್ತಣ ಬನಮೆತ್ತಣ ಕಿಟಿ
ಯೆತ್ತಣ ಕಾಟ್ಪಿಯದನಾಗಮುಂ ಶಿವ ಶಿವ ಮೇ
ಣೆತ್ತಣ ಕಾಳೆಗದುಜ್ಜುಗ
ಮೆತ್ತಣ ಪರಿಭವಮಿದೆನಗೆ ಸಾರ್ದುದು ಚಿತ್ರಂ ॥ ೬

ಈತಂ ನರನಕ್ಕುಮೊ ಪಡಿ
ಮಾತೇಂ ಮಗುಳ್ದಾನೆ ಶಬರನಪ್ಪೆನೊ ರಣಸಂ
ಜಾತಜಯಲಕ್ಷ್ಮಿಯಗ್ಗದ
ಬೂತಾಟಮೊ ತಿಳಿಯೆನೆಂದವಂ ಚಿಂತಿಸಿದಂ ॥ ೭

ಎಂದು ತನ್ನೊಳಾಳೋಚನಂಗೆಯ್ದು—

ತಿಳಿದನೆ ಶಂಭುವೆಂದು ತಱಿಸಂದು ಮಹೋಜ್ಜ್ವಳಶೈವಶಕ್ತಿಯ
ಗ್ಗಳಿಕೆಯ ಕಂಡು ಕಂಡುಮವನಾಹವದೊಳ್ ತಿಳಿಯಲ್ಕೆ ಸಾಧ್ಯಮೇ
ವಿಳಸಿತವೇದರಾಶಿ ಸಲೆ ಕಾಣದ ದೇವನನದ್ವಿತೀಯನಂ
ತೊಳಗುವಖಂಡಚಿನ್ಮಯನನಾತ್ಮವಿಗುಪ್ತನನಪ್ರಮೇಯನಂ ॥ ೮

[ ಅಂತು ] ಪಲವಂದದಿಂ ಪಲುಂಬಿ ವಿರೂಪಾಕ್ಷನುಪೇಕ್ಷೆಯಿಂದೀ ಪರಾಜಯಂ ತಗುಳ್ದುದೆಂದು ನಿಜಾಂತರಂಗದೊಳ್ ಬಗೆದು ಕರುಣಾಬ್ಧಿಯಪ್ಪ ಶಂಕರನಂ ಕಿಂಕರತೆಯಿಂ ಸರಣ್ಬೊಕ್ಕು ತತ್ಕಾರುಣ್ಯಂಬಡೆದು ಪಗೆಯಂ ಪರಾಭವಿಪೆನೆಂದು ಕೌಂತೇಯಂ ಚಿಂತಾಪಂಕಮಂ ವಿವೇಕಜಳದಿಂ ತೊಳೆದು ವಿಮಳಮನಸ್ಕನಾಗಿ—

ಪರಮಶಿವಾಗಮೋಕ್ತವಿಧಿಯಿಂ ಮಣಲಿಂ ನೆಗಟ್ದೊಂದು ಲಿಂಗಮಂ
ನಿರುಪಮಭಕ್ತಿಯಿಂ ತಿಱಿದು ಪಡ್ಡಳಿ ಬಂದುಗೆ ಕಕ್ಕೆ ಮುತ್ತ ಪಾ
ದರಿಗಳ ಪೂಗಳಂ ಮೃದುಳಬಿಲ್ವದಳಂಗಳನಲ್ಲಿ ತಂದು ಶಂ
ಕರನನೊಱಲ್ದು ಪೂಜಿಸಿದನರ್ಥಿತವೈರಿಜಯಂ ಧನಂಜಯಂ ॥ ೯

ಬಲವಂದು ರುದ್ರಸೂಕ್ತಮ
ನೊಲವಿಂದೋದುತ್ತೆ ಮಣಿದು ಮಗುಳ್ದೆಱಗಿ ವಿನಿ
ರ್ಮಲಭಕ್ತಿಭಾವದಿಂ ಸಾಂ
ಜಲಿನಿಟಿಲಂ ನಿಗಮವಂದ್ಯನಂ ಕೀರ್ತಿಸಿದಂ ॥ ೧೦

ಜಯ ಜಯ ಕಾಲಕಾಲ ಫಣಿಭೂಷಣಭೀಷಣ ಸೋಮ ಕೋಮಲಾ
ಶಯ ಯಮಿನುತ್ಯ ನಿತ್ಯ ಶಿತಿಕಂಧರ ಸಿಂಧುರಕೃತ್ತಿವಸ್ತ್ರ ದು
ರ್ಜಯ ಭವಭಂಜನಾಂಜನವಿವರ್ಜಿತ ನಿರ್ಜಿತಘೋರಮಾರ ನಿ
ರ್ಜಯ ಭುವನೇಶ ಪಾಶಹರ ಕಿಂಕರಶಂಕರ ಪುಷ್ಟಿವರ್ಧನಾ ॥ ೧೧

ನಿನ್ನ ಪದಭೃತ್ಯನೆನಿಸಿ
ರ್ದೆನ್ನಂ ಗೆಲ್ದಂ ಕಿರಾತನೀತನನೀಗಳ್
ಬನ್ನಂಬಡಿಸುತೆ ಸೋಲಿಪ
ಪನ್ನತಿಕೆಯನಿತ್ತು ಪೊರೆ ಕೃಪಾಳುಗಳರಸಾ ॥ ೧೨

ಎನ್ನಾಳ್ದಂ ನೀನಿರುತಿರೆ
ಬನ್ನಮಿದೆನಗಾಗೆ ಕೊಱತೆಯಾವಂಗೆಂಬಾ
ಬಿನ್ನಣಮಂ ತಿಳಿದೆನ್ನಂ
ಮನ್ನಿಸಿ ರಿಪುಜಯಮನಿತ್ತು ಪೊರೆ ಪುರಮಥನಾ ॥ ೧೩

ಎಂದು ಪಲವಂದದಿಂ ನುತಿಸಿ ದೈನ್ಯಂದೋಱ ಪಾರ್ಥಂ ಪ್ರಾರ್ಥಿಸಿ ಶಬರಂಗಭಿಮುಖನಾಗಿ ನಿಂದು ನಿರೀಕ್ಷಿಸಿ ನಿಜಭುಜಾಸ್ಫಾಲನಂಗೆಯ್ದು—

ಇನ್ನಱಯಲ್ಕೆ ಬರ್ಪುದೆಲೆ ಧೂರ್ತಕಿರಾತ ಭವತ್ಪರಾಕ್ರಮ
ಪ್ರೋನ್ನತಿಯೆಟ್ಟಿರಂ ಪೊಱಮಡೆನ್ನಧಿನಾಥಮಹೇಶನೊಲ್ಮೆ ದಲ್
ಸನ್ನಿದಮಾದುದಿಂದೆನಗೆ ನಿನ್ನಸುವಂ ನೆಱ ಪೀರ್ವೆನಾವ ದೇ
ವನ್ನಿನಗೀತು ಬರ್ಪನವನಂ ಸದೆದಿಕ್ಕುವೆನೀ ಕ್ಷಣಾರ್ಧದೊಳ್ ॥ ೧೪

ಎಂದು ರೋಷಾರುಣೇಕ್ಷಣದಿನಭೀಕ್ಷಿಸುತ್ತಿರೆಯಿರೆ—

ಮಣಲ ಲಿಂಗದ ಮಸ್ತಕಾಗ್ರದ ಪುಷ್ಪಮಂಜರಿ ಮಾಣದಾ
ಕ್ಷಣಮೆ ತಳ್ತಡದಾ ಕಿರಾತನ ಮಂಡೆಯಲ್ಲಿರೆ ಕಂಡು ಕಾ
ರಣಮಿದೇಂ ಪೊಸತೆಂದು ಸಾದ್ಭುತಮಾನಸಂ ಮಗುಳ್ದೀಕ್ಷಿಸು
ತ್ತಣಿಯರಂ ಬಿಡದಿತ್ತ ಲಿಂಗದ ಶೂನ್ಯಶೀರ್ಷಮನರ್ಜುನಂ ॥ ೧೫

ಇದನಿನ್ನುಂ ಮಗುಳ್ದೊರ್ಮೆ ನೋೞ್ಪೆನೆನುತುಂ ಪೂಗೊಂಚಲಂ ತಂದು ಸೂ
ಡಿದನಾ ಲಿಂಗದ ಮಸ್ತಕಾಗ್ರದೊಳೆ ಸಮ್ಯಗ್ಭಕ್ತಿಯಿಂದಾಗಮೋ
ಕ್ತದ ಮಾರ್ಗಂಬಿಡಿದೊಲ್ದು ಪೂಜಿಸಿ ಕರಂ ಕೊಂಡಾಡಿ ಮೆಯ್ಯಿಕ್ಕಿ ನೋ
ಡಿದನಿತ್ತಲ್ ಶಬರೋತ್ತಮಾಂಗದೆಡೆಯಂ ಪ್ರಾಂಚದ್ಗುಣಂ ಫಲ್ಗುಣಂ ॥ ೧೬

ಕಂಡನಖಂಡಪುಷ್ಪಭರಮಂಜರಿಯಿಂ ಶಬರೋತ್ತಮಾಂಗದೊಳ್
ಮಂಡಿತಲಿಂಗಮಸ್ತಕದೊಳಂತದನೀಕ್ಷಿಸಿ ಕಾಣದಾದನಾ
ಖಂಡಲಸೂನುವದ್ಭುತರಸಂಬಡೆದಾಟ್ದು ಭಯಾಬ್ಧಿಯಲ್ಲಿ ಮುಂ
ಕೊಂಡು ಮುಳುಂಗಿ ತೇಲ್ದುವವನೀಕ್ಷಣಯುಗ್ಮಪಯಶ್ಚರದ್ವಯಂ॥ ೧೭

ಹರ ಹರ ದೇವದೇವನಿವನಲ್ತೆ ಶಿವಂ ಭುವನೈಕವಲ್ಲಭಂ
ಗುರು ಸಕಲಾಮರರ್ಗೆ ಶಬರಾಕೃತಿಯಿಂ ಮದನುಗ್ರಹಾರ್ಥಮೀ
ಪರಿ ನಡೆತಂದನಲ್ತೆ ತಪದುಬ್ಬೆಗದುದ್ಭ್ರಮೆ ನೆತ್ತಿವತ್ತೆ ಸೈ
ತಿರಡೆ ಮರುಳ್ತನಂದಳೆದಿದಿರ್ಚಿದೆನೆನ್ನವೊಲಜ್ಞನಾವನೋ ॥ ೧೮

ಎಂದು ಬಗೆದಾಗಳ್—

ಪಡಿದೆಱೆದಂತೆ ಪಾಱೆತೆರ್ದೆ ಪವ್ವನೆ ಜುಮ್ಮೆನೆ ಮೆಯ್ನವಿರ್ ಪ್ರೋದ
ಳ್ಪಿಡಿಕಿಱಿದತ್ತು ಘರ್ಮಜಲಮುಣ್ಮಿದುದಂಗದೊಳಾಗ್ರಹಗ್ರಹಂ
ಕಡೆದೊಲಗಿತ್ತು ಕೌತುಕರಸಂ ಬಗೆಗುರ್ವಿದುದುತ್ಸವಂ ಮಡ
ಲ್ವಡರ್ದುದು ಭೀತಿ ಬೇರ್ವರಿದುದೇೞ್ಗೆಯನಾಳ್ದುದು
ರಾಗಸಂಪದಂ ॥ ೧೯

ಬೀತುದು ಬಿಂಕಮೋಡಿದುದು ಮೂಢತೆ ಮೂಡಿದುದಶ್ರು
ಕಣ್ಗಳೊಳ್
ಕಾತುದು ಭೀತಿವಲ್ಲರಿ ಮನೋಗದಮುಂ ತಱಿಸಂದು ನಿಂದುದು
ದ್ಭೂತಮಹಾದ್ಭುತಂ ಮನದೊಳಂಗದೊಳಾಯ್ತು ವಿವರ್ಣವೃತ್ತಿ ಚಿಂ
ತಾತುರನಾಗಿ ಬೆಳ್ಪಳಿಸಿ ಚೇವಸಮುಂ ತಳೆದಂ ಧನಂಜಯಂ ॥ ೨೦

ಉಱಿವೆಳಗು ಸಂಜೆ ನಸುಮು
ರ್ಬಳುರ್ದಂಬರದಂತೆ ತಿಳಿವು ರಾಗಂ ನೆಗಟ್ದು
ಮ್ಮಳಮನೊಳಕೊಂಡ ಬಗೆಯಿಂ
ತಳವೆಳಗಾಗುತ್ತೆ ಪಾರ್ಥನಂದಿಂತೆಂದಂ ॥ ೨೧

ತಿಳಿದೆನೆ ಶಂಭುವೆಂದು ಬಹುಬಾಣದಿನೆಚ್ಚೊಡೆ ತಾಗದಂದದೇಂ
ತಿಳಿದೆನೆ ದಿವ್ಯಮಾರ್ಗಣದಿನಾನಿಸೆ ತಳ್ವದೆ ನುಂಗಿದಂದದೇಂ
ತಿಳಿದೆನೆ ಕೈಯ್ಯ ಚಾಪಮನಡಾಯುಧಮಂ ಸೆಳೆದೀಟ್ಟಿ ಕೊಂಡೊಡಂ
ತಿಳಿವೊಳಸಾರ್ದುದಕ್ಕಟ ಪುರಾಕೃತಕರ್ಮದ ಪೆರ್ಮೆ
ಯೆಂತುಟೋ ॥ ೨೨

ಆವನ ಮಾಯೆಯಿಂ ತ್ರಿಜಗವಾದುದು ಸೂರ್ಯಸುಧಾ
ಕರರ್ ಪೊದ
ಳ್ದಾವನ ತೇಜದಿಂ ಬೆಳಗುವರಾ ಭುವನೋತ್ಕರರಕ್ಷೆ ಶಿಕ್ಷೆ ಮೇಣ್
ಆವನಧೀನಮಾವನೊಳೆ ತೋರ್ಪುದು ವಿಶ್ವಮಿದೆಂದುಮಾ ಮಹಾ
ದೇವನೊಳಾಹವಂ ಗಡೆನಗದ್ಭುತಮದ್ಭುತಮೇನನೆಂದಪೆಂ ॥ ೨೩

ಶಿವ ಶಿವ ಸಲ್ವುದೇ ಸಮರಮಿಂತೆನಗದ್ವಯನೊಳ್ ಮಹೇಶನೊಳ್
ಭವಹರನೊಳ್ ಮಹಾಮಹಿಮನೊಳ್ ಜ್ವಲನಾಕ್ಷನೊಳ
ಕ್ಷಯಾಂಗನೊಳ್
ಪ್ರವಿದಿತನಾದಬಿಂದುಕಳೆಯಿಂ ಮಿಗೆ ಮೀಱಿದನೊಳ್ ಶ್ರುತಿಸ್ಮೃತಿ
ಸ್ತವನಕತೀತನೊಳ್ ಜಗದ ಜೀವರನಾಡಿಪ ಸೂತ್ರಧಾರನೊಳ್ ॥ ೨೪

ಕಲಹಂ ತಕ್ಕುದೆ ನೋೞ್ಪೊಡಿಂತೆನಗೆ ಸಚ್ಚಿದ್ರೂಪನೊಳ್ ನಿತ್ಯನಿ
ರ್ಮಳನೊಳ್ ಪ್ರಾಕೃತನಾಮತರೂಪಗುಣಚೇಷ್ಟಾಲಂಬನಂದೋಱದು
ಜ್ವಳನೊಳ್ ಸಂದಣುವಿಂಗಣುಸ್ಥಿತಿ ಮಹತ್ತಿಂಗಂ ಮಹತ್ತಾದ ನಿ
ಶ್ಚಲನೊಳ್ ನಿರ್ಭಯನೊಳ್ ನಿರಸ್ತಜಡತಾಸಂಸರ್ಗನೊಳ್
ಭರ್ಗನೊಳ್ ॥ ೨೫

ಅಂಗುಟದಿಂ ರಸಾತಳಕೆ ಮೆಟ್ಟಿದನಾ ದಶಕಂಠನಂ ಮಹಾ
ಸಂಗರದೊಳ್ ವಿಭಂಗಿಸಿದನಾಂತಸುರರ್ಕಳನಾರ್ದು ಸುಟ್ಟನಾ
ರ್ಪಿಂ ಗಗನಸ್ಥಿತಾಸುರಪುರತ್ರಯಮಂ ಸದೆದಂ ಕೃತಾಂತನಂ
ತುಂಗಪರಾಕ್ರಮಂ ಗಿರಿಶನೀತನೊಳೆಂತುಟೊ ಗೆಲ್ಲದುಜ್ಜುಗಂ ॥ ೨೬

ಮುಳಿದಾಂ ನೋೞ್ಪಿಂದಮೀ ಕಣ್ಣೆರಡಱೊಳೆ ಮಹಾವಿಶ್ವ
ತಶ್ಚಕ್ಷುವಂ ಕೆ
ಯ್ಗೊಳಿಸುತ್ತಿರ್ಕೆಯ್ಗಳಿಂ ಕಾದುವ ಸಡಗರಮೀ ವಿಶ್ವತೋ
ಬಾಹುವೊಳ್ ಸಾ
ರ್ದೆಳಸುತ್ತುಂ ಪೋರ್ವ ಬಿಂಕಂ ಪದಯುಗದೊಳಮೀ
ವಿಶ್ವತಃಪಾದನೊಳ್ ಸಂ
ಗಳಿಸಿತ್ತೀ ವಿಶ್ವತೋವಕ್ತ್ರನೊಳೆ ಪುರುಡುವಾತೆನ್ನದೋ
ಮದ್ವಿಮೋಹಂ ॥ ೨೭

ಮೂದಲೆವಾತುಗಳ್ ಗಡ ಮಹಾನಿಗಮೋಕ್ತಿಗತೀತನೊಳ್ ಜಯಾ
ಹ್ಲಾದದ ಝುಂಕೆಗಳ್ ಗಡ ಜಗತ್ರಯದುರ್ಜಯನೊಳ್ ಶರೌಘದಿಂ
ಭೇದಿಪ ಬಿನ್ನಣಂ ಗಡ ಜಿತಾಂತಕನೊಳ್ ಮಿಗೆ ಮುಷ್ಟಿಯುದ್ಧದಿಂ
ಕಾದುವ ಕಜ್ಜಮುಂ ಗಡ ನಿರಂಗನೊಳಿಂತಿದು ಚಿತ್ರಮಲ್ಲವೇ ॥ ೨೮

ಹರ ಹರ ತಾರ್ಕ್ಷ್ಯನೆತ್ತ ಫಣಿಯೆತ್ತ ಮಹಾವನವಹ್ನಿಯೆತ್ತ ಕಾ
ೞ್ಮರಮುಮದೆತ್ತ ವಜ್ರಧರನೆತ್ತ ಧರಾಧರಮೆತ್ತ ಮತ್ತಕೇ
ಸರಿಪತಿಯೆತ್ತ ವನ್ಯಗಜಮೆತ್ತ ಪೊಣರ್ಕೆಗಿವೆಂತು ನಿಲ್ವವಾ
ಪರಿ ಜಗದೇಕದೇವಶಿವನೆತ್ತ ಧನಂಜಯನೆತ್ತ ಧಾತ್ರಿಯೊಳ್ ॥ ೨೯

ಪುಟ್ಟದ ಪೊಂದದುಂಟೆನಿಸದಿಲ್ಲೆನಿಸುತ್ತಿರದೆಯ್ದೆ ಮಾಯೆಯಂ
ಮುಟ್ಟದ ಪಿಂಗದೋಸರಿಸದೊಂದಿರದಾತ್ಮರನಾತ್ಮಪಾಶದಿಂ
ಕಟ್ಟುವ ಕಟ್ಟುವಗ್ಗಮನದಂ ಪಱಿದಿಕ್ಕುವ ಮಿಕ್ಕ ತೋರ್ಪ ಕೆ
ಯ್ಗೆಟ್ಟುವ ಮುಟ್ಟೆ ಸಿಲ್ಕದ ಮಹಾತ್ಮನೊಳಪ್ಪುದೆ ಮತ್ಸರಾಕ್ರಮಂ॥೩೦

ಎಂದಿಂತು ಚಿಂತಿಸುತೆ ಫಲ
ವಂದದೆ ಬಗೆನೊಂದು ಹಮ್ಮದಂಬೋಗಿರೆ ಪಾ
ರ್ಥಂ ದಯೆಯಿಂದವನಿರ್ದೆಡೆ
ಗಿಂದುಧರಂ ತಳರ್ದು ತಣ್ಪುವೀಱಿದನಾಗಳ್ ॥ ೩೧

ಪೊಗೆಯುೞಿದಗ್ನಿಯಂತೆ ಮುಗಿಲೋಡಿದ ಭಾಸ್ಕರನಂತೆ ಮಾಯೆ ಪೆ
ಯ್ವಗೆದ ನಿಜಾತ್ಮನಂತೆಒಱೆಯುರ್ಚಿದ ಕೂರಸಿಯಂತೆ ಕಾಂತಿ ಕೆ
ಯ್ಮಿಗೆ ಶಬರಾಂಗಮಂ ತೊಱೆದು ಪೂರ್ವನಿಜಾಕೃತಿವೆತ್ತಲಂಪಿನಿಂ
ಸೊಗಯಿಸುತಿರ್ದನಾಗಮುಶಿರಂ ಪೊಗೞುತ್ತಿರೆ ಚಂದ್ರಶೇಖರಂ ॥ ೩೨

೮

# ಮುದ್ದಣ : ' ಮುದ್ದಣ-ಮನೋರಮೆ '

ಈ ತೆಱದೆ ಕಾಡುಂ ನಾಡುಂ ಮನೋಜ್ಞಮಾಗೆ ಸಂಪ್ರಾಪ್ತವಾದ ವರ್ಷಾಕಾಲದೊಳೊಂದು ದೆವಸಂ ಜೈಗುಂಬೊೞ್ತಿನೊಳೆಂದಿನಂತಿರೋಲಗಂ ಪರಿಯೆ, ಕಬ್ಬಿಗರ ಬಲ್ಲಹಂ ಮುದ್ದಣನರಮನೆಯಿಂ ಪೊಱಮಟ್ಟು ನೆರೆವೀದಿವಿಡಿದು ಪೊರೆವೀಡಿಂಗೆಯ್ತರ್ಪುದುಮಾತನ ಮಡದಿ ಮನೋರಮೆ ದೂರದೆ ಕಂಡೆೞ್ದು ಇದಿರ್ವಂದು ಕಾಲ್ಗೆ ನೀರಂ ನೀಡಿ ಮತ್ತಂ ಕೆಯ್ವಿಡಿದೊಳಚೌಕಿಗೆಗೊಯ್ದು ಮಣೆಯಿತ್ತು ಕುಳ್ಳಿರಿಸಿ ಒಡನೆಯೆ ತನಿವಣ್ಣಂ ತಿನಲಿತ್ತು ಕೆನೆವಾಲಂ ಕುಡಿವೊಡಿತ್ತು ಉಪಚರಿಸುತಿರ್ದಳ್. ಈವುಪಚಾರದಿನಾತನ ಪಸಿವುಂ ಬಳಲ್ಕೆಯುಂ ಮುಡಿಯೆ ಕೆಳದಿ ನಱುದಂಬುಲಮಂ ಸವಿಯಲ್ಕೆಂದು ಮಡಿದೀಯುತುಮಿರೆ, ಇಂತು ಸುಖಸಲ್ಲಾಪಂಗೊಳುತಿರ್ದರ್. ಅದೆಂತೆನೆ—

ಮನೋರಮೆ—(ಮೆಲ್ನುಡಿಯಿಂ) ನೋೞ್ಪದೀ ಪಗಲ್ಗಳೆಂತೊ ಪಿರಿಯುವು. ಪಗಲುಮಿರುಳುಂ ಸುರಿವ ಬಲ್ಸೋನೆಯ ಜಿನುಂಗಿನ ತ್ರಣೆನೆನ್ನ ಬಗೆಯುಂ ಬೇಸತ್ತುದು. ಅಂತದಱಿನೇನಾನುಮೊಂದು ನಲ್ಗತೆಯಂ ಪೇೞ !

ಮುದ್ದಣಂ— ಪ್ರಾಣೇಶ್ವರಿ ! ತಡೆಯೇಂ ! ಇನಿತೊಂದು ಬಯಕೆ ತಲೆದೋಱಿ ಆವ ಗಹನಂ ? ಆದೊಡವಾವ ನಲ್ಗತೆಯಂ ಪೇೞ್ವೆಂ ? ಏಂ ಭೋಜಪ್ರಬಂಧಂ? ವಿಕ್ರಮವಿಜಯಂ, ಮಹಾವೀರ ಚರಿತಂ ?

ಮನೋರಮೆ— ಇಸ್ಸಿ ! ಇವಱೊಳೆನಗಳ್ಕಱಿಲ್ಲಂ; ಉೞಿ ದೊಡಮೞಿದೊಡಂ ಬೞ್ಪಿದೋಱುವ ರಸಭರಿತಂ ಚರಿತಮೈಸೆ.

ಮುದ್ದಣಂ— ನಿನಗಾವ ರಸದೊಳಿಷ್ಟಂ? ಶೃಂಗಾರರಸದೊಳೆ? ವೀರರಸದೊಳೆ ? ಹಾಸ್ಯರಸದೊಳೆ ?

ಮನೋರಮೆ— ಆವ ರಸದೊಳೆಂದೊಡೇಂ? ನವರಸದೊಳಂ.

ಮುದ್ದಣಂ— ಅಂತಿರೆ ಮತ್ತಮಾ ಕತೆಯಾವುದು ?

ಮನೋರಮೆ— ರಾಮಾಯಣದೊಳೇನಾನುಮೊಂದು.

ಮುದ್ದಣಂ— ಅಂತೆಯೆ ಅಕ್ಕೆ. ಸೀತಾಸ್ವಯಂವರಮಂ ಪೇೞ್ವೆಂ.

ಮನೋರಮೆ— ಆಂ ಮುನ್ನಮೆ ಕೇಳ್ದಿರ್ಪೆನಲ್ತೆ !

ಮುದ್ದಣಂ— ಏಂ ಸೀತಾಪಹರಣಕಥನದೊಳ್ ಬಯಕೆಯೆ ?

ಮನೋರಮೆ— ಉಃ ! ಆನೊಲ್ಲೆಂ.

ಮುದ್ದಣಂ— ಮೇಣಾವ ನಲ್ಗತೆಯಂ ಪೇೞ್ವೆನೋ.

ಮನೋರಮೆ— ಇಂತೇಕುಸಿರ್ವಯ್ ? ನಾಡೊಳೆನಿತ್ತೊ ರಾಮಾಯಣಂಗಳೊಳವು. ನೀಂ ಕೇಳ್ದುದಱೊಳೊಂದಂ ನಲ್ಮೆ ದೋಱೆ ಕಂಡು ಪೇೞ್ವುದು.

ಮುದ್ದಣಂ— ನೀನೆ ಬಂದನಾಯ್ದುಕೊಳ್ವುದು.

ಮನೋರಮೆ— ಶ್ರೀರಾಮಂ ಅಶ್ವಮೇಧಮಂ ಕೆಯ್ಕೊಂಡ ನೆಂಬರಲ್ತೆ; ಆ ಕತೆಯೆ ಅಕ್ಕುಂ.

ಮುದ್ದಣಂ— ಈಗಳಱಿತೆಂ; ಶೇಷರಾಮಾಯಣಮಂ ಪೇೞ್ವೆದೆಂಬೆಯೆ ?

ಮನೋರಮೆ— ಅಪ್ಪುದಪ್ಪುದು. ಆದೊಡೆ ಮುನ್ನಮಾರಾರ್ಗಿದನೊರೆದರ್ ?

ಮುದ್ದಣಂ— ಮುನ್ನಂ ಶೇಷಂ ವಾತ್ಸ್ಯಾಯನಂಗೆ ಪೇೞ್ದನದನೆ ನಿನಗೆ ಬಿತ್ತರಿಪೆಂ. ಆದೊಡೆ ಒಲ್ಗತೆ ಕಣಾ ! ಒಂದೆರೞ್ದಿವಸಕ್ಕೆ ಮುಡಿಯದು.

ಮನೋರಮೆ— ಇರ್ಕೆ. ಓರೊಂದು ದೆವಸಮಿನಿಸಿನಿಸಂ ಪೇೞ್ದೊಡೇಂ ?

ಮುದ್ದಣಂ— ಅಕ್ಕುಂ. ಆವ ಧಾಟಿಯೊಳ್ ಪೇೞ್ವೆಂ; ಪದ್ಯದೊಳ್ ಪೇೞ್ವೆನೊ ? ಗದ್ಯದೊಳ್ ಪೇೞ್ವೆನೊ ?

ಮನೋರಮೆ— ಪದ್ಯಂ ವಧ್ಯಂ, ಗದ್ಯಂ ಹೃದ್ಯಂ. ಹೃಷ್ಯಮಪ್ಪ ಗದ್ಯದೊಳೆ ಪೇೞ್ವುದು.

ಮುದ್ದಣಂ— (ನಸುನಗೆಯಿಂ) ಅದಂತಿರ್ಕೆ. ಅದಱೊಳ್ ಇಂತಪ್ಪ ನಲ್ಗತೆಯಂ ಬಿತ್ತರಿಸಿದೊಡೆ ಅರಮನೆಯೊಳ್ ರನ್ನಗಡಗಮಂ ಪೊನ್ನ ಕಂಠಿಕೆಯಂ ಮೆಚ್ಚನೀವರ್. ನೀನೀವುದೇಂ ?

ಮನೋರಮೆ— ಪೆಱತೇಂ ? ಎನ್ನನೆ ನಾನೀವೆಂ.

ಮುದ್ದಣಂ— ಬಲ್ಗಡುಸುಗಾರ್ತಿಯೈಸೆ ! ಅಱಿಯಾ ಮುನ್ನಮೆ ನಿನ್ನ ತಾಯ್ತಂದೆವಿರಿನಗಿತ್ತರೆಂಬುದಂ ?

ಮನೋರಮೆ— ಇದೇತಱ ನುಡಿ ! ಪೋಕೆ. ಆಂ ಪರಾಧೀನೆ ಗಡ ! ಪುರಾಣಮನೋದಿದಿಂಬೞಿಯಮಲ್ತೆ ದಕ್ಷಿಣೆಯನೀವುದು. ಅರಮನೆಯವರುಂ ಕಬ್ಬಮಂ ಕಂಡಲ್ತೆ ಕಚ್ಚಟಿಯನಿತ್ತರ್. ಆನುಂ ಕತೆಯಂ ಕೇಳ್ದು ಸೊಗಸಾಗೆ ಬಲ್ಲಂತೆ ಸಮ್ಮಾನಿಸುವೆಂ.

ಮುದ್ದಣಂ— ಒಳ್ಳಿತೊಳ್ಳಿತು ! ಕತೆಯನಾಲಿಸಿ ಲಾಲಿಸಿ ಬಿಱಿಕ್ಕವೀಯೆನೆಂದೊಡೆ ಬಿಡೆಂ ನೋೞ್ಪೆಂ.

ಮನೋರಮೆ— ಆನುಂ ನೋೞ್ಪೆಂ ಕತೆಯ ಪುರುಳೆಂತಿರ್ಕು ಮೆಂದು.

ಮುದ್ದಣಂ— ಆದೊಡಾಲಿಸು. ಸ್ವಸ್ತಿ ಶ್ರೀಮತ್ಸುರಾಸುರೇಂದ್ರ ನರೇಂದ್ರಮುನಿಂದ್ರಫಣೀಂದ್ರಮಣಿಮುಕುಟತಟಘಟಿತ—

ಮನೋರಮೆ— ಓ ಓ ! ತಡೆ ! ತಡೆ ! ವಸುಧೆಗೊಡೆಯನಪ್ಪ ರಾಮಚಂದ್ರನ ಕತೆಯಂ ಪೇೞ್ನೆ ಬಸದಿಗೊಡೆಯರಪ್ಪ ಸುರೇಂದ್ರರ ಚರಿತೆಯಂ ಪೇೞ್ವುದೇಂ ! ಸಾಲ್ಗುಂ ಸಾಲ್ಗುಂ. ಇಂತೆರ್ದೆಗೊಳ್ವ ಕತೆಗೆಂತುಡುಗೊಱೆಯಂ ಗೆಯ್ವೆನೊ !

ಮುದ್ದಣಂ— ನಲ್ನುಡಿಯಿದು ರಮಣಿ ! ಕಚಂಗಳಾಣೆ ! ಅಲ್ತು, ಬಸದಿಯಿಂದ್ರರ ಕತೆಯಲ್ತು; ರಾಮಚಂದ್ರನ ಕತೆಯನೆ ಪೊಗೞ್ದು ಪೇೞ್ವುದಿದು ಸಕ್ಕದದೊಂದು ಚೆಲ್ವು.

ಮನೋರಮೆ— ಲೇಸು, ಲೇಸು ! ನೀರಿೞಿಯದ ಗಂಟಲೊಳ್ ಕಡುಬಂ ತುಱುಕಿದಂತಾಯ್ತು; ಕನ್ನಡದ ಸೊಗಸನಱಿಯಲಾರ್ತನಿಲ್ಲೆನಗೆ ಸಕ್ಕದದ ಸೊಗಸಂ ಪೇೞ್ವುದು ಗಡ !

ಮುದ್ದಣಂ— ಅಪ್ಪೊಡಿನ್ನೆಂತೊ ಒರೆವೆಂ ?

ಮನೋರಮೆ—ತಿರುಳ್ಗನ್ನಡದ ಬೆಳ್ನುಡಿಯೊಳೆ ಪುರುಳೊಂದೆ ಪೇೞ್ವುದು. ಕನ್ನಡಂ ಕತ್ತುರಿಯಲ್ತೆ !

ಮುದ್ದಣಂ— ಅಪ್ಪುದಪ್ಪುದು. ಆದೊಡಂ ಸಕ್ಕದವೊಂದೆ, ರನ್ನವಣಿಯಂ ಪೊನ್ನಿಂ ಬಿಗಿದಂತೆಸೆಗುಂ; ಅದಱಿಂ ಕರ್ಮಣಿಸರದೊಳ್ ಚೆಂಬವಳಮಂ ಕೋದಂತಿರೆ, ರಸವೊಸರೆ, ಲಕ್ಕಣಂ ಮಿಕ್ಕಿರೆ, ಎಡೆಯೆಡೆಯೊಳ್ ಸಕ್ಕದದ ನಲ್ನುಡಿ ಮೆಱೆಯೆ, ತಿರುಳ್ಗನ್ನಡದೊಳೆ ಕತೆಯನುಸಿರ್ವೆಂ.

೯

# ' ಗೀತಗಳು '

## (೧) ನಿಜಗುಣಶಿವಯೋಗಿಗಳು : " ಶ್ರೀಗುರುವಚನ "

ಶ್ರೀಗುರುವಚನೋಪದೇಶವನಾಲಿಸಿ
ದಾಗಳಹುದು ನರರಿಗೆ ಮುಕುತಿ ॥ ಪಲ್ಲವಿ

ದುರಿತಕರ್ಮವನೊಲ್ಲದಿರು ಪುಣ್ಯವನೆ ಮಾಡು
ಹರನಡಿವಿಡಿ ಶಾಂತರೊಡನಾಡು
ಕರುಣವಿರಲಿ ಜೀವರೊಳು ನೀತಿವಿದನಾಗು
ಪೊರೆ ಪೊರ್ದಿದರನೆಂದು ಬೆಸಸುವ ॥ ೧

ನಿಂದಿಸಿ ನುಡಿಯದಿರಾರನು ಮನಸಿಗೆ
ಬಂದಂತೆ ನಡೆಯದಿರಿಹದಲ್ಲಿ
ಕುಂದುವಡೆಯದಿರು ಕಾಮಾದಿಗಳನು ಜಯಿ
ಸೆಂದು ಕೈವಿಡಿದನುಗ್ರಹಿಸುವ ॥ ೨

ಭವಮಾಲೆಗಲಸು ಪುಸಿಯದಿರೆಡರು ಬಂದು
ಕವಿಯಲಂಜದಿರು ಸಂಪದದೊಳು
ತವೆ ಮದವಳಿದಿರು ತತ್ವಸಂತತಿಯನು
ವಿವರಿಸಿ ನೋಡೆಂದು ತಿಳುಪುವ ॥ ೩

ಬಳಸದಿರದೆ ೃತವನು ಬಾಹ್ಯದಲ್ಲಿ ನಿ
ನ್ನೊಳಗೇಕೋಭಾವನೆಯೊಡಗೂಡು
ತಿಳಿದು ಸಮಯನಿಷ್ಠೆಗಲಿ ವೇದವಿಧಭಕ್ತಿ
ಗಳನಗಲದಿರೆಂದುಸುರುವ ॥ ೪

ಆರು ನಾನೆಂದು ವಿಚಾರಿಸು ವಿಷಮಸಂ
ಸಾರವಿದನು ಕನಸೆಂದರಿ
ಮಾರಮರ್ದನಶಂಭುಲಿಂಗವನೊಲಿಸಿ ಗಂ
ಭೀರಸುಖದೊಳಿರೆಂದರುಪುವ ॥ ೫

## (೨) ಪುರಂದರದಾಸರು : " ಅಳುವ ಗೋಪಾಲ "

ಬಾರೆ ಗೋಪಮ ನಿಮ್ಮ ಬಾಲಯ್ಯನಳುತಾನೆ
ಬಾರೆ ಗೋಪಮ್ಮ ॥ ಪಲ್ಲವಿ

ಆರು ತೂಗಿದರು ಮಲಗನು ಮುರವೈರಿ
ಬಾರೆ ಗೋಪಮ ॥ ಅನುಪಲ್ಲವಿ

ನೀರೊಳು ಮುಳುಗಿ ಮೈಯೊರಸೆಂದಳುತಾನೆ
ಬಾರೆ ಗೋಪಮ
ಭಾ ಬೆನ್ನಲಿ ಹೊತ್ತು ಮೈನೋವೆಂದಳುತಾನೆ
ಬಾರೆ ಗೋಪಮ್ಮ ॥ ೧

ಧರಣಿ ಕೋರೆಯಲಿಟ್ಟು ದವಡೆ ನೊಂದಳುತಾನೆ
ಬಾರೆ ಗೋಪಮ್ಮ
ದುರುಳ ರಕ್ಕಸನ ಕರುಳ ಕಂಡಳುತಾನೆ
ಬಾರೆ ಗೋಪಮ್ಮ ॥ ೨

ನೆಲನನಳೆದು ಪುಟ್ಟ ಬೆರಳು ನೊಂದಳುತಾನೆ
ಬಾರೆ ಗೋಪಮ್ಮ
ಛಲದಿಂದ ಕೊಡಲಿಯ ಪಿಡಿದೇನೆಂದಳುತಾನೆ
ಬಾರೆ ಗೋಪಮ್ಮ ॥ ೩

ಬಲುಸೈನ್ಯ ಕಪಿಗಳ ನೋಡೇನೆಂದಳುತಾನೆ
ಬಾರೆ ಗೋಪಮ್ಮ
ನೆಲುವಿನ ಬೆಣ್ಣೆಯು ನಿಲುಕದೆಂದಳುತಾನೆ
ಬಾರೆ ಗೋಪಮ್ಮ ॥ ೪

ಬತ್ತಲೆ ನಿಂತವನ ಎತ್ತಿಕೊ ಎಂದಳುತಾನೆ
ಬಾರೆ ಗೋಪಮ್ಮ
ಉತ್ತಮ ತೇಜಿಯ ಹತ್ತೇನೆಂದಳುತಾನೆ
ಬಾರೆ ಗೋಪಮ್ಮ ॥ ೫

ತೊಟ್ಟಿಲೊಳಗೆ ಮಲಗಲೊಲ್ಲನು ಮುರವೈರಿ
ಬಾರೆ ಗೋಪಮ್ಮ
ದಿಟ್ಟ ಶ್ರೀಪುರಂದರವಿಠಲಗೆ ಮೊಲೆಕೊಡು
ಬಾರೆ ಗೋಪಮ್ಮ ॥ ೬

## (೩) ಕನಕದಾಸರು : " ತಲ್ಲಣಿಸದಿರು "

ತಲ್ಲಣಿಸದಿರು ಕಂಡ್ಯ ತಾಳು ಮನವೆ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ॥ ಪಲ್ಲವಿ

ಬೆಟ್ಟದಾ ತುದಿಯಲ್ಲಿ ಹುಟ್ಟಿರುವ ವೃಕ್ಷಕ್ಕೆ
ಕಟ್ಟೆಯನು ಕಟ್ಟಿ ನೀರೆರೆದವರು ಯಾರೋ
ಪುಟ್ಟಿಸಿದ ಸ್ವಾಮಿ ತಾ ಹೊಣೆಗಾರನಾದ ಮೇಲೆ
ಘಟ್ಟಿಯಾಗಿ ಸಲಹುವನು ಇದಕೆ ಸಂಶಯ ಬೇಡ ॥ ೧

ಅಡವಿಯೊಳಗಾಡುವ ಮೃಗಪಕ್ಷಿಗಳಿಗೆಲ್ಲ
ಅಡಿಗಡಿಗೆ ಆಹಾರವಿತ್ತವರು ಯಾರೋ
ಪಡೆದ ಜನನಿಯ ತೆರದೆ ಸ್ವಾಮಿ ಹೊಣೆಗೀಡಾಗಿ
ಬಿಡದೆ ರಕ್ಷಿಪನಿದಕೆ ಸಂದೇಹ ಬೇಡ ॥ ೨

ಕಲ್ಲೊಳಗೆ ಹುಟ್ಟಿ ಕೂಗುವ ಕಪ್ಪೆಗಳಿಗೆಲ್ಲ
ಅಲ್ಲಲ್ಲಿಗಾಹಾರವಿತ್ತವರು ಯಾರೋ
ಬಲ್ಲಿದನು ಕಾಗಿನೆಲೆಯಾದಿಕೇಶವರಾಯ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ॥ ೩

## (೪) ಮುಪ್ಪಿನಷಡಕ್ಷರಿಸ್ವಾಮಿಗಳು: "ಎನ್ನ ಕರೆಯಬನ್ನಿ"

ಹೆಮ್ಮಗಳು ನಾ ನಿಮ್ಮ
ನೆಮ್ಮಿಕೊಂಡಿರುವೆನ್ನೈ
ಗಮ್ಮನೇ ಎನ್ನುವನು ಕರೆಯಬನ್ನಿ ॥ ಪಲ್ಲವಿ

ನಮ್ಮವರ ಪಾಡುವೆನು
ನಮ್ಮವರ ಪೊಗಳುವೆನು
ನಮ್ಮವರನಾವಗಂ ಹರಸುತಿಹೆನು
ನಮ್ಮವರು ಬರುವುದನು
ಉಮ್ಮಳಿಸಿ ನೋಡುವೆನು
ಹಮ್ಮಿಸುವೆ ಮನದೊಳಗೆ ಬಾರದಿರಲು ॥ ೧

ಕುಟ್ಟುತ್ತ ಬೀಸುತ್ತ
ನೆಟ್ಟನೇ ನಮ್ಮ ಒಡ
ಹುಟ್ಟಿಹ ಪುರಾತನರ ಹಾಡುತಿಹೆನು
ಕಷ್ಟಘನ ಮರ್ತ್ಯದ
ಬಟ್ಟೆಯನು ಒಲ್ಲೆ ಕೃಪೆ
ಹುಟ್ಟದೇ ನಮ್ಮವರು ಕರೆಯಿರಯ್ಯ ॥ ೨

ನೀರ ಹೊಳೆಯಲಿ ನಿಂದು
ದಾರಿಯನು ನೋಡುವೆನು
ಬಾರದಿರೆ ಮನದೊಳಗೆ ಕರಗಿ ಕೊರಗಿ
ಆರೈದು ಮತ್ತೊಮ್ಮೆ
ದೂರದೃಷ್ಟಿಯನಿತ್ತು
ಸಾರಿ ನೋಡುವೆ ನಿಲುಕಿ ಅಳಲಿ ಬಳಲಿ ॥ ೩

ಬಂದವರ ಬರುವವರ
ನಿಂದವರ ನೆರೆದವರ
ಕುಂದದಲೆ ಕೇಳುವೆನು ನಮ್ಮವರನು
ಹಿಂದಾದ ದುಃಖದಲಿ
ನೊಂದೆನ್ನೆ ನಮ್ಮವರು
ಎಂದಿಗೇ ಎನ್ನನವನು ಕರೆಯಬಹರೊ ॥ ೪

" ಪದುಳವೇ ನಮ್ಮವರ
ಪದಪದ್ಮ " ಎನ್ನುವೆನು
ಪದಪಿಂದ ಕರಿದೊಯ್ಯಲೊಲ್ಲರೇಕೆ ?
ಉದಯಾಸ್ತಮಾನದಲಿ
ಕುದಿದು ಕೋಟಲೆಗೊಂಬೆ
ಹೃದಯ ತಾ ಕರಗದೇ ನಮ್ಮವರಿಗೆ ॥ ೫

ಅಳಲುವೆನು ಮನದೊಳಗೆ
ಬಳಲುವೆನು ಬಾರದಿರೆ
ಕಳೆಯೇರುವೆನು ಒಮ್ಮೆ ನೆನೆದು ನೆನೆದು
ಮಲಹರಣ ಶರಣರಾ
ಬಲವ ನೋಡುವೆನೊಮ್ಮೆ
ಸಲೆಯೆನ್ನ ಕನಸಿಂಗೆ ಬಾರರೆನುತ ॥ ೬

ಹಿಂದುಳಿಯಿತಮವಾಸ್ಯೆ
ಮುಂದೆ ಹುಣ್ಣಿಮೆ ಬಂತು
ಎಂದಿಗೇ ಎನ್ನನು ಕರೆಯಬಹರೊ ?
ನೊಂದು ಸುಯ್ಗರೆವೆನು
ಬೆಂದು ಬೆಂಡಾಗುವೆನು
ಚಂದವೇ ತಮಗೆನ್ನ ನೋಡದಿಹುದು ? ॥ ೭

ತರಗೆಲೆಯು ಗಿರುಕೆನಲು
ಹೊರಗ ನಾನಾಲಿಸುವೆ
ಬರವಿಲ್ಲದಿರೆ ಮನದಿ ಸುಯ್ಗರೆವೆನು
ಪರರ ಶಿಶುವೆಂದೆನುತ
ಶರಣರು ಎನ್ನುವನು
ಮರೆದರೋ ಎಂದೆನುತ ಹೆದರುತಿಹೆನು ॥ ೮

ಶರಣರೊಳು ಸುಖದುಃಖ
ದಿರವ ಹೇಳುವೆ ನಾನು
ಪರರೆನ್ನ ಚಿಂತೆಯನ್ನರಿಯರಾಗಿ
ಅರಸು ಷಡಕ್ಷರಿಯ
ವರನೆನ್ನ ಕಾಡದಿರೆ
ಶರಣರಿಗೆ ಪೇಳಿ ನಾ ಕೇಳ್ವೆನಯ್ಯ ॥　　೯

## (೫) ಸರ್ಪಭೂಷಣಶಿವಯೋಗಿಗಳು: "ಪರತತ್ವದ ಬೆಳೆ"

ಶರಿರವೆಂದೆಂಬುವ ಹೊಲನ ಹಸನುಮಾಡಿ
ಪರತತ್ವಬೆಳೆಯನೆ ಬೆಳೆದುಣ್ಣಿರೋ ॥　　ಪಲ್ಲವಿ

ಶಮೆದಮೆಯೆಂದೆಂಬುವೆರಡೆತ್ತುಗಳ ಹೂಡಿ
ವಿಮಲಮಾನಸವ ನೇಗಿಲನೆ ಮಾಡಿ
ಮಮಕಾರವೆಂದೆಂಬ ಕರಿಕೆಯ ಕಳೆದಿಟ್ಟು
ಸಮತೆಯೆಂದೆಂಬ ಗೊಬ್ಬರವ ಚೆಲ್ಲಿ ॥　　೧

ಗುರುವರನುಪದೇಶವೆಂಬ ಬೀಜವ ಬಿತ್ತಿ
ಮೆರೆವ ಸಂಸ್ಕಾರವೃಷ್ಟಿಯ ಬಲವಿ
ಅರಿವೆಂಬ ಪೈರನೆ ಬೆಳಸುತೆ ಮುಸುಗಿರ್ದ
ದುರಿತದುರ್ಗುಣವೆಂಬ ಕಳೆಯ ಕಿತ್ತು ॥　　೨

ಸ್ಥಿರಮುಕ್ತಿಯೆಂದೆಂಬ ಧಾನ್ಯವ ಬೆಳೆದುಂಡು
ಪರಮಾನಂದದೊಳು ದಣ್ಣನೆ ದಣಿದು
ಗುರುಸಿದ್ಧನಡಿಗಳಿಗೆರಗುತೆ ಭವವೆಂಬ
ಭರವನು ತಮ್ಮ ಸೀಮೆಗೆ ಕಳುಹಿ ॥　　೩

---

# ಟಿಪ್ಪಣಿ

## ೧. ನಾಗಚಂದ್ರ : ‘ ಸೀತಾಪಹರಣ ’

ನಾಗಚಂದ್ರನಿಗೆ ಅಭಿನವಪಂಪನೆಂಬ ಹೆಸರು ರೂಢಿಯಲ್ಲಿದೆ. ಇವನು ಮಲ್ಲಿನಾಥಪುರಾಣ ಮತ್ತು ರಾಮಚಂದ್ರಚರಿತಪುರಾಣ ಎಂಬ ಎರಡು ಚಂಪೂಕಾವ್ಯಗಳನ್ನು ಬರೆದಿದ್ದಾನೆ. ರಾಮಚಂದ್ರ ಚರಿತಪುರಾಣಕ್ಕೆ ಪಂಪರಾಮಾಯಣವೆಂಬ ಹೆಸರುಂಟು. ಇದರಲ್ಲಿ ಜೈನಸಂಪ್ರದಾಯಕ್ಕನುಸಾರವಾಗಿ ರಾಮಾಯಣದ ಕಥೆ ನಿರೂಪಿತ ವಾಗಿದೆ. ಈ ಕವಿಯ ಕಾಲ ಕ್ರಿ. ಶ. ಸು. ೧೧೦೦ ಎಂದು ಪಂಡಿತರು ನಿರ್ಣಯಿಸಿದ್ದಾರೆ. ಈತನು ವಿಜಾಪುರದವನಾಗಿರಬಹು ದೆಂದು ಊಹಿಸಲಿಕ್ಕೆ ಅವಕಾಶವಿದೆ.

ಈ ಕಾವ್ಯಭಾಗವನ್ನು ಪಂಪರಾಮಾಯಣದಿಂದ ಆಯ್ದುಕೊಳ್ಳ ಲಾಗಿದೆ. ರಾವಣನು ಕಪಟತನದಿಂದ ಸೀತಾದೇವಿಯನ್ನು ಅಪಹರಿಸಿ ಕೊಂಡು ಹೋದ ಪ್ರಸಂಗವು ಇಲ್ಲಿ ಹೃದಯಗ್ರಾಹಕವಾಗಿ ವರ್ಣಿತ ವಾಗಿದೆ.

ಪದ್ಯ ೧—೫ : ಶಂಭುಕ-ರಾವಣನ ತಂಗಿಯಾದ ಚಂದ್ರ ನಖಿಯ ಮಗ. ವಿದಾರಿಸು-ಸೀಳು. ಅಸುರ-ಭಯಂಕರ. ಚಂದ್ರ ಹಾಸ-ಕತ್ತಿ. ಪಗಂಡುಗೊಳ್-ದಟ್ಟವಾಗಿ ಹೆಣೆದುಕೊಳ್ಳು. ಮುಗುಳ್-

ಹಿಂದಿರುಗು. ಉಗು-ಹೊರಹೊಮ್ಮು. ತಣ್ಬುೞಿಲ್-ತಂಪಾದ ತೋಪು. ಬಲಭದ್ರ-ರಾಮ. ಕಣ್ಬೊಲ-ದೃಷ್ಟಿಪಥ. ಬಿಸವಂಡ-ಆಶ್ಚರ್ಯ.

೬—೧೦ : ಎಳವಾಳೆ-ಎಳೆಯ ಮೀನು. ತೆಱಿಂಬೊಳೆ-ಉಜ್ವಲವಾಗಿ ಪ್ರಕಾಶಿಸು. ಸಿರಿಸ-ಶಿರೀಷಪುಷ್ಪ. ಬಾಸಿಗ-ಹೂವಿನ ಸರ. ಪಾಣ್ಬ-ವ್ಯಭಿಚಾರಿ. ಪರಿಮಱಿಯಾಡು-ಹಾರಾಡು. ಅತನು-ಮನ್ಮಥ. ದೋರ್ವಲ್ಲರಿ-ಬಾಹುಲತೆ. ದೊರೆತು-ಸಮಾನ. ಹೃದ್ಭವ-ಮನ್ಮಥ. ಆರೆ-ಗರ್ಜಿಸಲು. ಏಸುವೆತ್ತಂ-ಬಾಣಪ್ರಯೋಗಕ್ಕೆ ಗುರಿಯಾದನು. ಸುಮನಶ್ಶಿಲೀಮುಖಂ-ಪುಷ್ಪಬಾಣ. ಬಾರ್ತೆಗಿಡು-ಸ್ಥಿತಿತಪ್ಪು. ಮಾನಸಿಕ್ಕೆ-ಪೌರುಷ. ಏಳಿದಂ-ಕೀಳಾದವನು.

೧೧—೧೫ : ಅನ್ವಯ-ವಂಶ. ಎಳದುವರಿ-ಹೀನಮಾರ್ಗದಲ್ಲಿ ಹರಿ. ದಾನಲೇಖೆ-ಮದೋದಕದ ಗೆರೆ. ಮಧುವ್ರತ-ಭ್ರಮರ. ಪದೆ-ಆಸೆಪಡು. ಅಳಿಪು-ಆಸೆ. ಅವಲೋಕಿನಿ-ಒಂದು ವಿದ್ಯಾದೇವತೆ. ಅಪತ್ಯರ್-ಮಕ್ಕಳು.

೧೬—೨೦ : ಮುನ್ನೀರ್-ಸಮುದ್ರ. ಬೆನ್ನೀರ್-ಬಿಸಿನೀರು. ವೀತಶಂಕಂ-ಶಂಕೆಬಿಟ್ಟವನು. ಪುದಿ-ಕವಿ. ಬಿದಿ-ವಿಧಿ. ಏಗೊಳ್-ಅಂಗೀಕರಿಸು. ಕೀಱು-ಚೀರು.

೨೧—೨೫ : ಎಸಕ-ಕಾರ್ಯ. ಬಲ್ವಲ-ಅಧಿಕ. ವಾಸುದೇವ-ಲಕ್ಷ್ಮಣ. ವೈಕುರ್ವಣಶಕ್ತಿ-ರೂಪಾಂತರ ಹೊಂದುವ ಶಕ್ತಿ. ರಘೂದ್ವಹ-ರಾಮ. ವೈಕಲ್ಯ-ಕಳವಳ. ಕಾಪು-ರಕ್ಷಣೆ. ಓಪಳ್-ಪ್ರಿಯೆ. ತವಿಸು-ನಾಶಮಾಡು. ಬಲಂ-ರಾಮ. ಸಾರಣ್ಗೆ-ಸಮೀಪಕ್ಕೆ. ಪೞಿ-ನಿಂದೆ.

೨೬—೩೦ : ಕುಱು-ಕುಳ, ಕಬ್ಬಿಣದ ದಂಡ. ಸೈಂಹಿಕೇಯ-ರಾಹು. ಜಾತಿಸ್ಮರ-ಪೂರ್ವಜನ್ಮವಿಷಯದ ನೆನಪುಳ್ಳವನು. ವಿಸ್ಫುಲಿಂಗ-ಕಿಡಿ. ಕಳ್-ಕಳವುಮಾಡು. ಕಱುತ್ತು-ಕೋಪಿಸಿ.

ಎಱಂಕೆ-ರೆಕ್ಕೆ. ಅಡುರ್ತು-ಅಡ್ಡಗಟ್ಟಿ, ತಡೆದು. ಎಕ್ಕತುಳಂ-ಸಮಾನವಾಗಿ.

೩೧—೩೫ : ತಿಣ್ಣ-ಭಾರ. ಪಂಚಪದ-ಅರ್ಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸಾಧು ಎಂಬ ಪಂಚಪರಮೇಷ್ಠಿಗಳನ್ನು ಕುರಿತ ಮಂತ್ರ. ನೀಳ್ದ-ನಿಡಿದಾದ. ಪಕ್ಷ್ಮ-ಕಣ್ಣೆವೆ. ಎಳದಾಗು-ನಿರ್ವಿಣ್ಣನಾಗು. ಮನ್ಯು-ದುಃಖ. ಕರೆಗಣ್ಮು-ಮೀರು. ಕಂದಳ-ಮೊಳಕೆ. ಖಗಗ್ರಾಮಣಿ-ಪಕ್ಷಿಶ್ರೇಷ್ಠ. ಪುತ್ರಿಕಾ-ಪ್ರತಿಮೆ. ಸೂಡು-ದಹನ.

೩೬—೪೦ : ನಿಬ್ಬರಿಸು-ಮುಚ್ಚು. ಬಾರಿಪರ್-ನಿವಾರಿಸುವವರು. ಬವರ-ಕಾಳಗ. ಕೆತ್ತು-ಸ್ಫುರಿಸು, ಹಾರು. ಅಱಗ-ಕ್ಲೇಶ, ವ್ಯಥೆ.

೪೧—೪೫ : ಉಳ್ಳಲರ್-ಬಿರಿದು ಅರಳು. ಸರಂಗೆಯ್-ಧ್ವನಿ ಮಾಡು. ಉಬ್ಬೆಗ-ಉದ್ವೇಗ. ಪಂಚನಮಃಸ್ಕಾರ-ಪಂಚಪರಮೇಷ್ಠಿಗಳಿಗೆ ನಮಸ್ಕಾರ. ಮೃಗಮದ-ಕಸ್ತೂರಿ. ಪಿಕ-ಕೋಗಿಲೆ. ಕಮಲಾಕರ-ಸರೋವರ. ಕಳರುತಿ-ಮಂಜುಳಧ್ವನಿ. ತಳ-ಕರತಳ. ಲತಾಂತ-ಪುಷ್ಪ. ಮೆಯ್ಗರೆ-ಮೈಮರಸಿಕೊಳ್ಳು. ಕಂತು-ಮನ್ಮಥ. ಒನಲ್-ಕೋಪಿಸು. ಸೇದೆವಡು-ಆಯಾಸಪಡು.

## ೨. ಬಸವಣ್ಣನವರು : 'ವಚನಗಳು'

ಭಕ್ತಿಭಾಂಡಾರಿ ಬಸವಣ್ಣನವರು ಕಲ್ಯಾಣ ಪಟ್ಟಣದಲ್ಲಿ ರಾಜ್ಯವಾಳಿದ ಬಿಜ್ಜಳನ ಮುಖ್ಯಮಂತ್ರಿಯಾಗಿದ್ದರು. ಇವರ ಕಾಲ ಕ್ರಿ. ಶ. ಸು. ೧೧೬೦. ಇವರು ಷಟ್‌ಸ್ಥಳದ ವಚನಗಳು, ಶಿಖಾರತ್ನವಚನ, ಕಾಲಜ್ಞಾನವಚನ, ಮಂತ್ರಗೋಪ್ಯ ಮೊದಲಾದುವನ್ನು ರಚಿಸಿದ್ದಾರೆ.

ಇಲ್ಲಿಯ ವಚನಗಳನ್ನು ಷಟ್‌ಸ್ಥಳದ ವಚನಗಳಿಂದ ಆಯ್ದು ಕೊಳ್ಳಲಾಗಿದೆ. ಹೃದಯದ ಆಳದಿಂದ ಬಂದ ಈ ವಚನಗಳು ಬಸವಣ್ಣನವರ ವ್ಯಕ್ತಿತ್ವದ ವಿಕಾಸವನ್ನು ಸೂಚ್ಯವಾಗಿ ರೇಖಿಸುತ್ತವೆ.

ವಚನ ೧—೫ : ತವರಾಜ-ಒಂದು ಬಗೆಯ ಸಕ್ಕರೆ. ಹುಯ್ಯಲು-ಮೊರೆ, ಆರ್ತನಾದ. ಅಂದಣ-ಪಲ್ಲಕ್ಕಿ. ಸೊಣಗ-ನಾಯಿ.

೬—೧೦ : ತೊಡಿಗೆ-ಆಭರಣ. ನಿಧಾನ-ನಿಧಿ. ಬೆಂತರ-ಒಂದು ಬಗೆಯ ಪಿಶಾಚಿ.

೧೧—೧೫ : ಹೊಲಬಿಗ-ಸರಿಯಾದ ದಾರಿಯಲ್ಲಿರುವವನು. ಕಮ್ಮಟ-ಟಂಕಸಾಲೆ. ಏಡಿಸು-ಅಣಕಿಸು.

೧೬—೨೦ : ದಿಬ್ಯ-ದಿವ್ಯಪ್ರಮಾಣಮಾಡಲು ಹಿಡಿದುಕೊಳ್ಳುವ ಕಾಸಿದ ಕಬ್ಬಿಣ ಮೊದಲಾದ ವಸ್ತು. ಪುರಾತರು-ಪುರಾತನರು, ಹಿಂದಿನ ಶಿವಶರಣರು.

೨೧—೨೫ : ಸಮಯಾಚಾರಿ-ಆಚಾರ್ಯಪುರುಷ. ಹೊಗಳತೆ-ಹೊಗಳಿಕೆ. ಇಮ್ಮೆಯ್-ಎರಡೂ ಮಗ್ಗುಲು. ಸುರಗಿ-ಸಣ್ಣ ಕತ್ತಿ. ಜೂಬು-ಭಯಹುಟ್ಟಿಸುವ ವಸ್ತು.

೨೬—೩೧ : ಅವುಟು-ಮೂರೂವರೆ. ದಂಡಿಗೆ-ವೀಣೆ. ನಿಷ್ಪತ್ತಿ-ಕೊನೆಯ ಪರಿಣಾಮ, ಪರಿಪಾಕ.

## ೩. ಹರಿಹರ : ‘ ಪುಷ್ಪರಗಳೆ ’

ಹರಿಹರನ ಕಾಲದ ವಿಷಯವಾಗಿ ಪಂಡಿತರಲ್ಲಿ ಭಿನ್ನಾಭಿಪ್ರಾಯ ವಿದೆ. ಈತನು ಕ್ರಿ. ಶ. ೧೨೦೦ ರ ಸುಮಾರು ಇದ್ದನೆಂದು ಇಟ್ಟು ಕೊಳ್ಳಬಹುದು. “ ಪರಮಾನಂದಾಬ್ಧಿ ಪಂಪಾಪುರದರಸ ವಿರೂಪಾಕ್ಷಸಾಕ್ಷಾತ್‌ಸುಪುತ್ರಂ ” ಎಂದು ಹೇಳಿಕೊಂಡಿರುವ ಈತನು ಹಂಪೆಯ ವಿರೂಪಾಕ್ಷನ ಪರಮಭಕ್ತನಾಗಿದ್ದನು. ಈತನು ಗಿರಿಜಾ

ಕಲ್ಯಾಣವೆಂಬ ಚಂಪೂಕಾವ್ಯವನ್ನೂ, ನೂರಕ್ಕೆ ಹೆಚ್ಚಿನ ಶಿವಗಣದ ರಗಳೆಗಳನ್ನೂ, ರಕ್ಷಾಶತಕ ಪಂಪಾಶತಕ ಮುಡಿಗೆಯ ಅಷ್ಟಕ ಮುಂತಾದ ಕೃತಿಗಳನ್ನೂ ರಚಿಸಿದ್ದಾನೆ.

ಪಂಪಾವಿರೂಪಾಕ್ಷನ ಪೂಜೆಗಾಗಿ ಹೂಗಳನ್ನು ಎತ್ತಿತಂದು ಅರ್ಪಿಸುವ ಸಂಭ್ರಮದ ಸನ್ನಿವೇಶವನ್ನು ಕವಿ ಈ ರಗಳೆಯಲ್ಲಿ ಭಕ್ತ್ಯತಿಶಯದಿಂದ ಬಣ್ಣಿಸಿದ್ದಾನೆ.

ಪಂಕ್ತಿ ೧—೫೦ : ಒಸರು-ಸ್ರವಿಸು. ಹರವರಿಯ-ವಿಶಾಲ ವಾದ. ಕರಡಗೆ ಸಂಪುಟ. ಕೈವಾರಿಸು-ಹೊಗಳು. ಸೌರಭ-ಸುವಾಸನೆ. ಉರವಣಿಸು-ಅಧಿಕವಾಗು. ಅಡ್ಡಮುಂ ತಿಗಟಮುಂ-ಅಡ್ಡವಾಗಿ ಮತ್ತು ತ್ರಿಕೋನಾಕಾರವಾಗಿ. ಉಗ್ಗಡಿಸು-ಘೋಷಿಸು. ಬೆಲ್ಲವತ್ತ-ಬಿಲ್ವಪತ್ರ. ಮುಂಗುಡಿ-ಮುಂಭಾಗ. ಕರದಿಂ-ಅತಿಶಯ ವಾಗಿ. ತೊನೆ-ಒಲೆದಾಡು. ಕುಕಿಲಿಱ್-ಕೂಕೂ ಎಂದು ಕೂಗು.

೫೧—೧೦೦ : ಅಳಿಮನ - (೧) ಹೀನಮನಸ್ಸು, (೨) ತುಂಬಿಯ ಮನಸ್ಸು. ಕಣ್ಣುಂಗತಿ-ಸರ್ವಸ್ವ. ತಿಱ್-ಕೊಯ್ಯು. ಅದಿರ್ಗಂತಿ-ಮಾಧವೀಲತೆ. ಜಾತಿ - (೧) ಜಾಜಿ- (೨) ಕುಲ. ಹೆಱೆಸೂಡಿದನ-ಚಂದ್ರಶೇಖರನ. ಪಡ್ಡಳಿ-ಕಣಗಿಲೆ. ಹೇರೀಳೆ-ದೊಡ್ಡಿಕಾಯ ಗಿಡ. ಮುಡಿವಾಳ-ಬಾಳದ ಬೇರು.

೧೦೧—೧೫೦ : ಕೊನರ್-ಚಿಗುರು. ಸೋಮಯ್ಯ-ಸೌರಾಷ್ಟ್ರದ ಸೋಮನಾಥ. ಪುಲಿಗೆಱೆ-ಈಗಿನ ಲಕ್ಷ್ಮೇಶ್ವರ. ಏವೆನೋ-ಏನುಮಾಡಲಿ. ನೇತ್ರ-ವಸ್ತ್ರ. ಸಾಗಿಸು-ಪ್ರೋಕ್ಷಿಸು. ಪೊಂಗು-ಉಬ್ಬು. ಬೀಗು-ಉಬ್ಬು. ಒಕ್ಕಲಿಕ್ಕು-ಧ್ವಂಸಮಾಡು. ಚಲ-ಹಠ.

೧೫೧—೨೦೦ : ಪಲ್ಮೊರೆ-ಹಲ್ಲುಮಸೆ. ಹಂಪೆಯರಸನ ಕುಮಾರಂ-ಇಲ್ಲಿ, ಹರಿಹರ. ಸಿತಗ-ದುಷ್ಟ. ಆಱಡಿ-(೧) ತುಂಬಿ, (೨) ಹಿಂಸೆ. ಗಳಗಳನೆ-ಶೀಘ್ರವಾಗಿ. ಎಬ್ಬಟ್ಟು-ಓಡಿಸು. ಉಪ್ಪ

ವಡಿಸು-ಎಚ್ಚರಗೊಂಡು ಏಳು. ತಳುವು-ತಡಮಾಡು. ಗಂಧವಹ-ವಾಯು. ತೂಪಿಜು-ರಕ್ಷೆಗಾಗಿ ಊದು. ಸಸಿನೆ-ನೇರವಾಗಿ. ತುಱುಬು-ಮುಡಿಸು. ಅಣ್ಪಿಕ್ಕು-ಲೇಪಿಸು. ಜಾದಿ-ಜಾಜಿ. ಪೂವಲಿ-ಪುಷ್ಪೋಪಹಾರ. ಸವಱು-ಸರಿಪಡಿಸು. ಸೀಗುರಿ-ಒಂದು ಬಗೆಯ ಚಾಮರ.

೨೦೧—೨೫೦ : ಆರೊಗಿಸು-ಭೋಜನಮಾಡು. ಹೆಱಸಾರ್-ಹಿಂದಕ್ಕೆ ಹೋಗು. ಎಯ್ದಿಸು-ತೃಪ್ತಿಪಡೆ. ಓಜೆ-ಕ್ರಮ. ಹಳವಿಸು-ಪ್ರಲಾಪಿಸು. ಗಳಪು-ಹರಟು. ಪಡಿ-ಪ್ರತಿ. ಪರುಷ-ಸ್ಪರ್ಶಶಿಲೆ, ಮುಟ್ಟಿದ್ದನ್ನು ಚಿನ್ನವಾಗಿಸುವ ಮಣಿ. ಸುರಭಿ-ಕಾಮಧೇನು. ಇಡುಕು-ಬಿಡು. ಅಕ್ಕಾಡು-ಕೊನೆಮುಟ್ಟು. ನಾಲ್ಕಕ್ಕರಂ-ವಿರೂಪಾಕ್ಷ ಎಂಬ ಅಕ್ಷರಗಳು. ಒಚ್ಚತ-ಒಂದೇ ಸಮ.

೨೫೧—೨೭೨ : ಬೋಳೆಯರ್-ದೇವತೆಗಳು. ಹೆಂಪಿಡಿದ-ಹಿರಿಮೆಯಿಂದ ಕೂಡಿದ.

ಅಕ್ಷಮಂ - ಅಸಮರ್ಥ. ಅಳಿಪಂ - ಲಾಲಸೆಯುಳ್ಳವನು. ಮಾಯಾಪಕ್ಷಂ-ಮಾಯೆಯ ಸಂಬಂಧವುಳ್ಳವನು.

## ೪. ರಾಘವಾಂಕ : 'ಚಂದ್ರಮತಿಯ ಪ್ರಲಾಪ'

ರಾಘವಾಂಕನು ಹರಿಹರದೇವನ ಸೋದರಳಿಯ ಮತ್ತು ಶಿಷ್ಯ. ಈತನ ಕಾಲವೂ ಕ್ರಿ. ಶ. ಸುಮಾರು ೧೨೦೦ ಎಂದು ಹೇಳಬಹುದು. ಈತನು ಷಟ್ಪದೀಸಂಪ್ರದಾಯದ ಪ್ರವರ್ತಕನೆಂದು ಹೆಸರಾಗಿದ್ದಾನೆ. ಹರಿಶ್ಚಂದ್ರಕಾವ್ಯ, ಸಿದ್ಧರಾಮಚಾರಿತ್ರ, ಸೋಮನಾಥಚರಿತೆ, ವೀರೇಶಚರಿತೆ, ಶರಭಚಾರಿತ್ರ, ಹರಿಹರಮಹತ್ವ ಇವು ಈತನ ಕೃತಿಗಳು. ಹರಿಹರನಂತೆ ಈತನೂ ಪಂಪಾವಿರೂಪಾಕ್ಷನ ನಿಸ್ಸೀಮಭಕ್ತ.

ಈ ಕಾವ್ಯಭಾಗವನ್ನು ಹರಿಶ್ಚಂದ್ರಕಾವ್ಯದಿಂದ ತೆಗೆದುಕೊಂಡಿದೆ. ಹರಿಶ್ಚಂದ್ರನು ವಿಶ್ವಾಮಿತ್ರನಿಗೆ ರಾಜ್ಯವನ್ನು ಒಪ್ಪಿಸಿ, ಕಾಶಿಯಲ್ಲಿ ತನ್ನ ಹೆಂಡತಿ ಚಂದ್ರಮತಿಯನ್ನೂ ಮಗ ರೋಹಿತಾಶ್ವನನ್ನೂ ಮಾರಿ,

ತಾನು ಹೊಲೆಯನಿಗೆ ಆಳಾಗಿ ಶ್ಮಶಾನವನ್ನು ಕಾದುಕೊಂಡಿರುತ್ತಾನೆ. ಕಾಡಿನಲ್ಲಿ ಹಾವು ಕಡಿದು ರೋಹಿತಾಶ್ವನು ಮರಣ ಹೊಂದಿದುದು, ಚಂದ್ರಮತಿ ಶವವನ್ನು ಕಂಡುದು, ಕೊನೆಯ ಸಂಸ್ಕಾರಕ್ಕಾಗಿ ಶವವನ್ನು ಸುಡುಗಾಡಿಗೆ ಒಯ್ದಾಗ ಅಲ್ಲಿ ಹರಿಶ್ಚಂದ್ರನು ವರ್ತಿಸಿದುದು ಇವು ಈ ಕಾವ್ಯಭಾಗದಲ್ಲಿ ಕರುಣರಸಭರಿತವಾಗಿ ನಿರೂಪಿತವಾಗಿವೆ.

ಪದ್ಯ ೧—೫ : ಒತ್ತಿಟ್ಟ-ಒತ್ತೆಯಿಟ್ಟ. ಸೂನೆಗಾಱ-ಕಟುಕ. ಮಾಡ-ಉಪ್ಪರಿಗೆ. ಹೇಳಿಗೆ-ಬುಟ್ಟಿ. ಬಾಣಸ-ಅಡಿಗೆಯ ಮನೆ. ಹಂತಿ-ಪಂಕ್ತಿ. ಮೂರಿ-ಬಾಯಿ. ಆಱ್-ಸಮರ್ಥವಾಗು. ಓರಂತೆ-ಒಂದೇ ಸವನೆ. ಸಲಬೇಹುದು-ಸಲ್ಲಬೇಕು. ಆರಯ್ಕೆ-ವಿಚಾರ. ಹುಲುಹುಳ್ಳಿ-ಹುಲ್ಲು ಕಟ್ಟಿಗೆ. ಅಡುಗಬ್ಬು-ಉರುವಲು.

೬—೧೦ : ಹದರು-ಕೈಯ ಮಣಿಕಟ್ಟು, ಹದಡು. ತತ್ತುಕ-ಜೊತೆಗಾರ (?). ಉಮ್ಮಳ-ವ್ಯಥೆ. ದಟ್ಟಿಸು-ಗದರಿಸು. ಅದ್ದನೊ-ಮುಳುಗಿದನೊ. ಹೊಡಕರಿಸು-ಪ್ರಜ್ವಲಿಸು.

೧೧—೧೫ : ಭಲ್ಲುಕ-ಕರಡಿ. ಚಚ್ಚರ-ಲಗುಬಗೆ. ಮಡಲಿಱಿ-ಹಬ್ಬು. ಕಾಳ-ಕತ್ತಲೆ.

೧೬—೨೦: ಅಗುರ್ವಿಸು-ಭಯಪಡಿಸು. ಮುರಿದ-ತಿರುಹಿದ. ಬಱಿತ - ಒಣಗಿದ, ಆರಿದ. ಕಡಗು - ಉತ್ಸಾಹಗೊಳ್ಳು, ಉಬ್ಬು. ಹಡಿಗೆತ್ತುದು-ಬಾಗಿಲು ಮುಚ್ಚಿತು. ಕರಕರಿಸು-ಪೀಡಿಸು. ಪರಿಣಾಮ-ಸಮಾಧಾನ.

೨೧—೨೫ : ನನ್ನಿಕಾಱ-ಸತ್ಯನಿಷ್ಠ. ಪಡಲಿಡು - ಚೆದರಿ ಬೀಳು. ಕಾಳಿಜ-ಹೃದಯಪಿಂಡ. ಸಿದುಗು-ಕೈಯಿಟ್ಟು ಹುಡುಕು. ಪಟ್ಟಿರಿಸು-ಮಲಗಿಸು. ಮುಟ್ಟಿಗೆ-ಚಿತೆ (?). ಹಾಗ-ಒಂದು ಅಲ್ಪ ನಾಣ್ಯ.

೨೬—೩೦ : ಐದೆ- ಮುತ್ತೈದೆ. ನೆಲದೆಱೆ - ಭೂಮಿಯ ಬಾಡಿಗೆ. ಹಾಳಂ ಬಿಡು-ಭೂಮಿಯನ್ನು ದತ್ತಿಯಾಗಿ ಬಿಟ್ಟುಕೊಡು.

೩೧—೩೫ : ಸಿಗ್ಗು-ನಾಚಿಕೆ. ಹೇವರಿಸು-ಅಸಹ್ಯಪಡು, ಹಿಂದೆಗೆ. ತೂಕದ ಕೋಲ ತೊಲೆ-ತಕ್ಕಡಿಯ ದಂಡಿಗೆ.

೩೬—೪೧ : ಗರುವಿಕೆ-ಹಿರಿಮೆ. ಗಾಡಿ - ಸೌಂದರ್ಯ. ಒಟ್ಟಜೆ-ಪರಾಕ್ರಮ. ಎಡೆವಟ್ಟೆ-ಮಧ್ಯಮಾರ್ಗ.

## ೫. ಕುಮಾರವ್ಯಾಸ : ' ಕರ್ಣನ ಸತ್ವಪರೀಕ್ಷೆ '

ಕುಮಾರವ್ಯಾಸನ ನಿಜವಾದ ಹೆಸರು ನಾರಣಪ್ಪ. ಈತನ ಕೃತಿ ' ಕರ್ಣಾಟಭಾರತಮಂಜರಿ '; ಇದನ್ನು ' ಗದುಗಿನ ಭಾರತ ' ಅಥವಾ ' ಕನ್ನಡ ಭಾರತ ' ಎಂದು ಕರೆಯುವುದೇ ರೂಢಿಯಾಗಿದೆ. ಕುಮಾರವ್ಯಾಸನ ಕಾಲ ಯಾವುದೆಂಬುದು ಸರಿಯಾಗಿ ತಿಳಿದಿಲ್ಲ. ಈತನು ಕ್ರಿ. ಶ. ೧೫ನೆಯ ಶತಮಾನದ ಪೂರ್ವಭಾಗದಲ್ಲಿ ಇದ್ದಿರಬೇಕೆಂದು ವಿದ್ವಾಂಸರ ಸಾಮಾನ್ಯಾಭಿಪ್ರಾಯ. ಈತನ ಜನ್ಮಸ್ಥಳ ಧಾರವಾಡ ಜಿಲ್ಲೆಯ ಕೋಳಿವಾಡ; ಆರಾಧ್ಯದೇವತೆ ಗದುಗಿನ ವೀರನಾರಾಯಣಸ್ವಾಮಿ.

ಇಲ್ಲಿಯ ಕಾವ್ಯಭಾಗವನ್ನು ಭಾರತದ ಉದ್ಯೋಗಪರ್ವದಿಂದ ಆಯ್ದುಕೊಂಡಿದೆ. ಪಾಂಡವರ ಅಜ್ಞಾತವಾಸವು ಮುಗಿದಬಳಿಕ ಅವರಿಗೆ ಕೌರವನಿಂದ ಅರ್ಧರಾಜ್ಯವನ್ನು ಕೊಡಿಸುವ ಸಂಧಾನಕ್ಕಾಗಿ ಕೃಷ್ಣನು ಹಸ್ತಿನಾವತಿಗೆ ಬಂದನು. ಸಂಧಿಪ್ರಯತ್ನವು ವಿಫಲವಾಯಿತು. ಕೃಷ್ಣನು ಹಿಂದಿರುಗುವಾಗ ಕರ್ಣನ ಬಳಿಗೆ ಬಂದು ಅವನನ್ನು ತನ್ನೊಡನೆ ರಥದಲ್ಲಿ ಸ್ವಲ್ಪದೂರ ಕರೆದುಕೊಂಡು ಹೋಗುತ್ತಾನೆ. ಆಗ ಏನು ಮಾತು ನಡೆಯಿತು, ಆ ಸತ್ವಪರೀಕ್ಷೆಯಲ್ಲಿ ಕರ್ಣನ ಧೀರೋದಾತ್ತತೆ ಹೇಗೆ ಪ್ರಕಾಶಗೊಂಡಿತು, ಆ ಬಳಿಕ ಹೆತ್ತ ತಾಯಿ ಕುಂತಿ ತನ್ನನ್ನು ಮೊದಲ ಬಾರಿ ಕಂಡಾಗ ಕರ್ಣನು ಹೇಗೆ ವರ್ತಿಸಿದನು ಎಂಬ ವಸ್ತು ಈ ಪದ್ಯಭಾಗದಲ್ಲಿ ಮನಮುಟ್ಟುವಂತೆ ನಿರೂಪಿತವಾಗಿದೆ.

ಸೂಚನೆ : ಅದಟ-ಶೂರ. ಅತುಳ-ಎಣೆಯಿಲ್ಲದ. ದಿವ ಮಣಿಯ ಮಗ-ಸೂರ್ಯಪುತ್ರ, ಕರ್ಣ.

ಪದ್ಯ ೧—೫: ಶೌರಿ-ಕೃಷ್ಣ. ಸಂವಾದಿಸು-ಹೋಲಿಸಿನೋಡು. ಅಂಜುಳಿ-ಅಂಜಲಿ, ಬೊಗಸೆ. ತಳಕಿಕ್ಕು-ತಳಕುಹಾಕು.

೬—೧೦ : ನಿಧಾನ-ನಿಶ್ಚಯ (?). ಹಸಾದ-ಪ್ರಸಾದ.

೧೧ ೧೫ : ಸೆರೆ - ರಕ್ತನಾಳ. ದೃಗುಜಲ - ಕಣ್ಣೀರು. ದುಮ್ಮಾನ-ಮನಸ್ಸಿನ ವಿಷಮಸ್ಥಿತಿ. ದಾತಾರ-ದಾನಿ. ಅರಿ-ಕತ್ತರಿಸು. ಅಡಗು-ಮಾಂಸ.

೧೬—೨೦ : ಸೊಗಸು-ಮೆಚ್ಚು. ರೂಢಿ-ಲೋಕ. ಹರಿಬ-ಪ್ರತೀಕಾರಕ್ರಿಯೆ. ಕೈವಾರ-ಹೊಗಳಿಕೆ. ಅರುಣಜಲ-ರಕ್ತ. ಆಜ್ಯ-ತುಪ್ಪ. ಚರು-ಹವಿಸ್ಸು. ಸಮಿಧೆ-ಕಟ್ಟಿಗೆ. ಕಪಾಲ-ತಲೆಬುರುಡೆ. ನಿಡುತೆರಳೆಗಳ - ಉದ್ದವಾದ ಮತ್ತು ಒತ್ತುಗೂಡಿಸಿದ. ಆಹವ-ಯುದ್ಧ. ಪತಿಯ ಅವಸರ-ಸ್ವಾಮಿಕಾರ್ಯ.

೨೧—೨೫ : ಖತಿ-ಕೋಪ. ಒಡ್ಡೈಸು-ಹೂಡು, ಮುಂದಿಡು. ಸಂಪ್ರತಿ-ಸಂಧಿ. ಸಂಗರ-ಯುದ್ಧ. ವಿಸಸನ-ಕೊಲೆ, ಯುದ್ಧ. ಮಂತ್ರ-ಮಂತ್ರಾಲೋಚನೆ. ನುಸುಳು - ಹೀನತ್ವ. ಹುಲುಸರವಿ-ಹುಲ್ಲಿನ ಹಗ್ಗ. ಹಿಸುಣ-ಚಾಡಿಕೋರ. ಬೇರ್ವರಿ-ಬೇರೂರಿ ಹರಡು. ಕಾಳುಮಾಡು-ವ್ಯರ್ಥಮಾಡು.

೨೬—೩೦ : ತಾತ-ತನ್ನ ತಂದೆಯಾದ ಸೂರ್ಯ. ಸೌರ ಮಂತ್ರ-ಸೂರ್ಯಮಂತ್ರ. ಔದಾರಿಯದ ಸುರತರು- ಉದಾರತೆಯಲ್ಲಿ ಕಲ್ಪವೃಕ್ಷ, ಎಂದರೆ ಕರ್ಣ ಅದ್ದಳು-ಮುಳುಗಿದಳು. ಕೈಲಿಡಿ-ನ್ಯಾಸ, ಸುರಕ್ಷಣೆಗಾಗಿ ಒಪ್ಪಿಸಿದ್ದು. ವಾಸಿ - ಪ್ರತಿಜ್ಞೆ. ಎಕ್ಕಟಿ-ಪ್ರತ್ಯೇಕವಾಗಿ. ಒಸೆ-ಪ್ರೀತಿಸು.

೩೧—೩೫: ವಿಗಡತನ-ಪ್ರತಿಕೂಲತ್ವ, ಕೆಡುಕತನ. ಮಾಣು-ನಿಲ್ಲಿಸು. ಪರರೋಲಗ-ಪರರ ಸೇವೆ. ಕಾಯಜನ ಪಿತ-ಮನ್ಮಥನ ತಂದೆ,ಕೃಷ್ಣ. ಒಕ್ಕತನ-ಕೂಡಿ ಬಾಳುವುದು. ಮಾದುಕಳೆ-ಬಿಟ್ಟುಬಿಡು.

## ೬. ರತ್ನಾಕರ : ‘ ಭರತವಿಜಯ ’

ರತ್ನಾಕರವರ್ಣಿಯ ಕಾಲ ಕ್ರಿ. ಶ. ೧೫೫೭ ಎಂದು ತಿಳಿದು ಬರುತ್ತದೆ. ಈತನು ಭರತೇಶವೈಭವ, ತ್ರಿಲೋಕಶತಕ, ಅಪರಾಜಿತೇಶ್ವರಶತಕ ಮೊದಲಾದ ಕೃತಿಗಳನ್ನು ರಚಿಸಿದ್ದಾನೆ.

ಈ ಪದ್ಯಭಾಗವನ್ನು ಭರತೇಶವೈಭವದ ‘ದಿಗ್ವಿಜಯಕಲ್ಯಾಣ’ ವೆಂಬ ವಿಭಾಗದಿಂದ ಆರಿಸಿಕೊಂಡಿದೆ. ಜೈನರ ಪ್ರಥಮತೀರ್ಥಂಕರನಾದ ಪುರಪರಮೇಶ್ವರನ ಹಿರಿಯ ಮಗ ಭರತೇಶ್ವರನು ದಿಗ್ವಿಜಯ ಮುಗಿಸಿಕೊಂಡು ಹಿಂದಕ್ಕೆ ಬರುವಾಗ ದಾರಿಯಲ್ಲಿ ಅವನ ತಮ್ಮನೂ ಆ ಯುಗದ ಕಾಮದೇವನೂ ಆದ ಬಾಹುಬಲಿಯ ರಾಜಧಾನಿ ಪೌದನಪುರದ ಬಳಿ ಅವನ ಚಕ್ರಾಯುಧವು ಮುಂದೆ ನಡೆಯದೆ ತಡೆದು ನಿಲ್ಲುತ್ತದೆ. ಚಕ್ರವರ್ತಿಗೆ ತಲೆಬಾಗದಿರುವವರ ಭೂಮಿಯಲ್ಲಿ ಹೀಗಾಗುವುದೆಂದು ಬಲ್ಲವರಿಂದ ತಿಳಿದು, ತನ್ನನ್ನು ಬಂದು ಕಾಣಬೇಕೆಂದು ಭರತನು ತಮ್ಮನಿಗೆ ಹೇಳಿಕಳಿಸುತ್ತಾನೆ. ಅಣ್ಣನ ಮಾತನ್ನು ಬಾಹುಬಲಿ ಅಲ್ಲಗಳೆದು, ಅವನನ್ನು ಎದುರಿಸಿ ನಿಲ್ಲುತ್ತಾನೆ. ಆಗ ಮಂತ್ರಿಗಳು ದೃಷ್ಟಿಯುದ್ಧ, ಜಲಯುದ್ಧ, ಮುಷ್ಟಿಯುದ್ಧ ಈ ಮೂರೂ ನಿಮ್ಮಿಬ್ಬರಿಗೆ ಮಾತ್ರ ನಡೆಯಲಿ ಎಂದು ಸೂಚಿಸುತ್ತಾರೆ. ಅದನ್ನು ಭರತ ಬಾಹುಬಲಿಗಳು ಒಪ್ಪಿ ಒಬ್ಬರ ಮುಂದೆ ಒಬ್ಬರು ನಿಂತಾಗ, ಭರತನು ತಮ್ಮನ ಮೇಲಿನ ಪ್ರೀತಿಯಿಂದ ಪ್ರೇರಿತನಾಗಿ ಅವನೊಡನೆ ಹೋರಾಡಲೊಲ್ಲದೆ ತಾನಾಗಿ ಸೋಲನ್ನು ಮೊದಲೇ ಒಪ್ಪಿಕೊಂಡು ತನ್ನ ಮಾತಿನಿಂದಲೇ ಬಾಹುಬಲಿಯ ಹೃದಯವನ್ನು ಹೇಗೆ ಗೆಲ್ಲುತ್ತಾನೆಂಬುದನ್ನು ರತ್ನಾಕರನು ಭರತನ ಗುಣಾತಿಶಯವು ಎದ್ದು ತೋರುವಂತೆ ಹೊಸ ರೀತಿಯಲ್ಲಿ ನಿರೂಪಿಸಿದ್ದಾನೆ.

ಪದ್ಯ ೧–೫: ಕುಂದಣದ ಅದ್ರಿ–ಚಿನ್ನದ ಬೆಟ್ಟ. ಕಳ–ಯುದ್ಧ ಕ್ಷೇತ್ರ. ಆಯತ–ವಿಸ್ತಾರವಾದ. ಕೈಬಿಳಿ–ಆಗ್ರಹಗೊಂಡು. ಚಕ್ರಿ–

ಚಕ್ರವರ್ತಿ, ಭರತ ಚಕ್ರವರ್ತಿ. ಅಂಗಜ - ಮನ್ಮಥ, ಬಾಹುಬಲಿ. ಪರಿಕಿಸು-ಪರೀಕಿಸು, ನಿಟ್ಟಿಸಿನೋಡು. ಆರಯ್ದು-ವಿಚಾರಮಾಡಿ. ದುರ್ಮನ-ಮನಸ್ಸಿನ ದುಃಸ್ಥಿತಿ.

೬—೧೦ : ಅಯ್ಯ-(ಇವರ)ತಂದೆ, ಆದಿತೀರ್ಥಂಕರ. ಹಾಗ-ಕಾಲುಭಾಗ. ಜಿನಪುತ್ರರು-ಆದಿಜಿನನ ಮಕ್ಕಳು.

೧೧—೧೫ : ಒರೆ-ಹೇಳು. ಅಂಕಪದ್ಧತಿ-ಯುದ್ಧದ ರೀತಿ. ಭೂಭುಜ-ರಾಜ. ಪೆಂಪು-ಮಹತ್ವ. ಒಗೆ-ಉದಿಸು, ಹುಟ್ಟು. ಹಗರಣವಾಡು-ಕೆಳದರ್ಜೆಯ ನಾಟಕದಲ್ಲಿ ಪಾತ್ರವಹಿಸು. ಜಸ-ಕೀರ್ತಿ. ಬದೆಗ-ಕೀಳುಮನುಷ್ಯ.

೧೬—೨೦ : ತರಹರಗೊಳ್ಳು-ಸೈರಿಸಿಕೊಳ್ಳು. ದೃಷ್ಟಿವಿಜಯ-ಒಬ್ಬನು ಇನ್ನೊಬ್ಬನನ್ನು ಎವೆಯಿಕ್ಕದೆ ದೃಷ್ಟಿಸಿ ನೋಡಿ ಗೆಲ್ಲುವುದು. ಪಂಚವಿಂಶತಿಚಾಪ-ಇಪ್ಪತ್ತೈದು ಬಿಲ್ಲಳತೆ. ತಿಳಿಪು-ಬೋಧಿಸು. ಜಳಿತು-ಶಕ್ತಿಗುಂದಿ.

೨೧—೨೫ : ಆಗುಳಿಪ-ಮುಳುಗಿಸುವ. ಅರ್ಥಭಜನೆ-ಅರ್ಥ ವಿಭಾಗ. ಬಾಯಾರೆ-ಬಾಯಿತುಂಬ. ಕುಂತು-ಕುಂದಿತು. ಏಳಿಸಿ-ಎಬ್ಬಿಸಿ. ಆಲಿ-ಕಣ್ಣುಗುಡ್ಡೆ.

೨೬—೩೦ : ಕೌಶಲಿ-ಭರತನ ರಾಜಧಾನಿ. ಪುರುಪರಮೇಶ-ಆದಿತೀರ್ಥಂಕರ. ಕೆಂಬಜ್ಜೆ-ಕೆಂಪುಬಣ್ಣದ ಹಜ್ಜೆ. ಜಂಜಡ-ಕ್ಲೇಶ.

೩೧—೩೫ : ಪೂಸರ - ಕುಸುಮಬಾಣ, ಬಾಹುಬಲಿ. ಪೂಗಣೆಯ-ಕುಸುಮಶರ, ಬಾಹುಬಲಿ. ಬೆಸಗೆಯ್ವ-ಅಪ್ಪಣೆಯನ್ನು ನಡೆಸುವ. ಜಲಜಾಸ್ತ್ರ-ಕಮಲಬಾಣ, ಬಾಹುಬಲಿ. ಭುಜಸರಿತ-ಭುಜದ ನೇರ. ಜಗತ್ಪದ-ಜಗತ್ತಿನ ಆಧಿಪತ್ಯ. ಕಾಪಥ-ಕೆಟ್ಟ ದಾರಿ.

೩೬—೪೧ : ಪೈಸರಿಸು-ಹಿಂದಕ್ಕೆ ಸರಿ,ಜಾರು. ಗಾಜಿಯಾಯ್ತು-ಕೆಟ್ಟುಹೋಯಿತು. ಇಡಿಕಿಱಿ-ಒತ್ತಾಗಿರು. ಆವಂಗ-ಯಾವ ರೀತಿ

## ೭. ಷಡಕ್ಷರದೇವ : ' ಮಣಲ ಲಿಂಗದ ಪೂಜೆ '

' ಉಭಯಕವಿತಾವಿಶಾರದ 'ನೆಂಬ ಬಿರುದುಳ್ಳ ಷಡಕ್ಷರ ದೇವನು ಮೈಸೂರು ಜಿಲ್ಲೆಯ ಎಳಂದೂರಿನ ಹಿರಿಯ ಮಠದ ಪಟ್ಟಾಧಿ ಕಾರಿಯಾಗಿದ್ದನು. ಈತನ ಕಾಲ ಕ್ರಿ. ಶ. ೧೬೫೫. ಈತನು ರಾಜಶೇಖರವಿಳಾಸ, ವೃಷಭೇಂದ್ರವಿಜಯ, ಶಬರಶಂಕರವಿಳಾಸ ಎಂಬ ಚಂಪೂಕಾವ್ಯಗಳನ್ನು ಕನ್ನಡದಲ್ಲಿಯೂ, ಕವಿಕರ್ಣರಸಾಯನ, ಭಕ್ತಾಧಿಕ್ಯ, ಶಿವಾಧಿಕ್ಯ ಮುಂತಾದ ಕೃತಿಗಳನ್ನು ಸಂಸ್ಕೃತದಲ್ಲಿಯೂ ರಚಿಸಿದ್ದಾನೆ.

ಈ ಕಾವ್ಯಭಾಗವನ್ನು ಶಬರಶಂಕರವಿಳಾಸದಿಂದ ಆಯ್ದುಕೊಳ್ಳಲಾಗಿದೆ. ಪಾಶುಪತಾಸ್ತ್ರವನ್ನು ಪಡೆಯಲು ತಪಸ್ಸುಮಾಡುತ್ತಿದ್ದ ಅರ್ಜುನನು ಕಿರಾತವೇಷದ ಶಿವನೊಡನೆ ಯುದ್ಧಮಾಡಿ ಸೋತು ಮನನೊಂದು, ಶಿವಾನುಗ್ರಹಪಡೆದು ವಿಜಯ ಸಂಪಾದಿಸಬೇಕೆಂದು ಮಳಲ ಲಿಂಗದ ಅರ್ಚನೆಯನ್ನು ಮಾಡಿದ ಪ್ರಸಂಗವು ಇಲ್ಲಿ ಹೃದ್ಯವಾಗಿ ವರ್ಣಿತವಾಗಿದೆ.

ಪದ್ಯ ೧—೫ : ಪಳಯಿಸು-ಪ್ರಲಾಪಿಸು. ಆರ್ಪು-ಶಕ್ತಿ. ಬೇವಸ-ವ್ಯಥೆ. ಅಳುರ್ಕೆ - ವ್ಯಾಪನೆ. ಒಳಸೋರ್-ಒಳಗೆ ಇಳಿ, ಇಂಗು. ಎಡೆವಿಡು-ಮಧ್ಯದಲ್ಲಿ ಕೈಬಿಡು.

೬—೧೦ : ಕಿಟಿ - ಹಂದಿ. ಕಾಟ್ಬಿಯದ-ಕಾಡಿನ ಬೇಡ. ಬೂತಾಟ-ವಿಕಟಚೇಷ್ಟೆ. ತಱಿಸಲ್-ನಿಶ್ಚಯಿಸು. ಮಣಲ್-ಮಳಲು, ಉಸುಕು. ಒಱಲ್-ಪ್ರೀತಿಸು. ಬಲವರು-ಪ್ರದಕ್ಷಿಣೆ ಹಾಕು.

೧೧—೧೫ : ಯಮಿ-ಯತಿ. ಶಿತಿಕಂಧರ-ನೀಲಕಂಠ, ಶಿವ. ಸಿಂಧುರಕೃತ್ತಿ-ಗಜಚರ್ಮ. ಪನ್ನತಿಕೆ-ಪರಾಕ್ರಮ. ಆಸ್ಫಾಲನ-ಚಪ್ಪರಿಸುವಿಕೆ. ಸನ್ನಿದಂ-ಸನ್ನಿಹಿತ. ಒತು-ಪ್ರೀತಿಸಿ. ಮಂಡೆ-ತಲೆ. ಅಣಿಯರಂ-ಅತಿಶಯವಾಗಿ.

೧೬—೨೦ : ಸೂಡು-ಧರಿಸು. ಉತ್ತಮಾಂಗ-ಶಿರಸ್ಸು. ಆಖಂಡಲಸೂನು - ಇಂದ್ರಪುತ್ರ, ಅರ್ಜುನ. ಪಯಶ್ಚರ-ಮೀನು. ಸೈತಿರು - ಸುಮ್ಮನಿರು. ಪಡಿದೆಱೆ - ಬಾಗಿಲುತೆರೆ. ಬೀ - ತೀರು. ಕಾ-ಕಾಯಿಬಿಡು. ಮನೋಗದ-ಮನಸ್ಸಿನ ವ್ಯಾಧಿ. ಬೆಳ್ಪಳಿಸು-ಬೆದರು. ಅಳುರ್-ವ್ಯಾಪಿಸು.

೨೧—೨೫ : ಉಟಿವೆಳಗು-ಬೆಳಕಿನ ಅವಶೇಷ. ತಳವೆಳಗಾಗು - ಬೆರಗಾಗು. ಮಾರ್ಗಣ - ಬಾಣ. ಅಡಾಯುಧ-ಖಡ್ಗ. ಈಟಿ-ಸೆಳೆ.

೨೬—೩೨ : ಪುರುಡುವಾತು-ಸ್ಪರ್ಧೆಯ ಮಾತು. ಮೂದಲೆವಾತು-ಚುಚ್ಚುಮಾತು. ಝುಂಕೆ - ಗದರಿಕೆ. ತಾರ್ಕ್ಷ್ಯ-ಗರುಡ. ಧರಾಧರ-ಪರ್ವತ. ಪೊಣರ್ಕೆ-ಹೋರಾಟ. ಪೊಂದು-ಸಾಯು. ಎಟ್ಟು-ಎಟುಕು, ನಿಲುಕು. ಹಮ್ಮದಂಬೋಗು-ಮೂರ್ಛೆಹೋಗು.

## ೮. ಮುದ್ದಣ : 'ಮುದ್ದಣ-ಮನೋರಮೆ'

ಮುದ್ದಣನ ನಿಜವಾದ ಹೆಸರು ನಂದಳಿಕೆ ಲಕ್ಷ್ಮೀನಾರಣಪ್ಪ. ಈತನು ಅರ್ವಾಚೀನ ಕವಿ; ಕ್ರಿ. ಶ. ೧೮೭೦ ರಿಂದ ೧೯೦೧ ರ ವರೆಗೆ ಜೀವಿಸಿದ್ದನು. ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿಯಲ್ಲೂ ಕುಂದಾಪುರದಲ್ಲೂ ಈತನು ವ್ಯಾಯಾಮಶಿಕ್ಷಕನಾಗಿ ಕೆಲಸ ಮಾಡಿದನು. ಇವನು ಅದ್ಭುತರಾಮಾಯಣ, ಶ್ರೀರಾಮಪಟ್ಟಾಭಿಷೇಕ, ರಾಮಾಶ್ವಮೇಧ ವೆಂಬ ಗ್ರಂಥಗಳನ್ನೂ ಕೆಲವು ಯಕ್ಷಗಾನ ಪ್ರಸಂಗಗಳನ್ನೂ ರಚಿಸಿದ್ದಾನೆ. ಮುದ್ದಣನ ಕಾವ್ಯದಲ್ಲಿ ನಮ್ಮ ಪ್ರಾಚೀನ ಕಾವ್ಯಮಾರ್ಗದ ಅನುಸರಣೆ ಇದ್ದರೂ ನವೀನ ದೃಷ್ಟಿಯಿದೆ.

ಈ ಭಾಗವನ್ನು ರಾಮಾಶ್ವಮೇಧವೆಂಬ ಗದ್ಯಕಾವ್ಯದ ಪೀಠಿಕಾಸಂಧಿಯಿಂದ ಆರಿಸಿಕೊಳ್ಳಲಾಗಿದೆ. ಕವಿ ಮುದ್ದಣ, ಆತನ ಮಡದಿ

ಮನೋರಮೆ ಇವರ ಸರಸಸಲ್ಲಾಪವು ಇಲ್ಲಿ ಸುಂದರವಾಗಿ ನಿರೂಪಿತವಾಗಿದೆ.

ಬೈಗುಂಬೊಟ್ಟು-ಸಂಧ್ಯಾಕಾಲ. ಕಬ್ಬಿಗರ ಬಲ್ಲಹ-ಕವಿಶ್ರೇಷ್ಠ. ಪೊರೆವೀಡು-ಮನೆಯ ಸಮೀಪ. ಚೌಕಿಗೆ-ಒಳಅಂಗಳ, ತೊಟ್ಟಿ. ಮುಡಿ-ತೀರು, ಪರಿಹಾರವಾಗು. ಬಲ್ಸೋನೆ-ದೊಡ್ಡಮಳೆ. ಬಟ್ಟೆದೋಱು- ದಾರಿ ತೋರಿಸು. ದೆವಸ - ದಿವಸ. ಕಚ್ಚಟಿ - ಕಡಗ. ಪುರುಳ್-ಹುರುಳು, ಅರ್ಥ. ಸುರೇಂದ್ರ-ಬಸದಿಯಲ್ಲಿಯ ಅರ್ಚಕ. ಕಚ-ಕೂದಲು. ಸಕ್ಕದ-ಸಂಸ್ಕೃತ. ಬೆಳ್ನುಡಿ-ಶುದ್ಧವಾದ ಮಾತು. ಕೋ-ಪೋಣಿಸು. ಲಕ್ಕಣ-ಲಕ್ಷಣ.

## ೬. 'ಗೀತಗಳು'

(೧) "ಶ್ರೀಗುರುವಚನ"—

ನಿಜಗುಣಶಿವಯೋಗಿಗಳ ಕಾಲ ಕ್ರಿ. ಶ. ಸು. ೧೫೦೦. ಅವರ ಕೈವಲ್ಯಪದ್ಧತಿಯಿಂದ ಈ ಗೀತವನ್ನು ತೆಗೆದುಕೊಂಡಿದೆ.

ಎಡರು-ಕಷ್ಟ.

(೨) "ಅಳುವ ಗೋಪಾಲ"—

ಪುರಂದರದಾಸರ ಕಾಲ ಕ್ರಿ. ಶ. ಸು. ೧೫೪೦. ಅವರ ಈ ಗೀತದಲ್ಲಿ ವಿಷ್ಣುವಿನ ದಶಾವತಾರಗಳು ಸೂಚಿತವಾಗಿವೆ.

(೩) "ತಲ್ಲಣಿಸದಿರು"—

ಕನಕದಾಸರ ಕಾಲ ಕ್ರಿ. ಶ. ಸು. ೧೫೫೦.

(೪) "ಎನ್ನ ಕರೆಯಬನ್ನಿ"—

ಮುಪ್ಪಿನ ಷಡಕ್ಷರಿಸ್ವಾಮಿಗಳ ಕಾಲ ಸು. ೧೬೫೦. ಇವರಿಗೆ ದೊಡ್ಡಕ್ಷರಿಸ್ವಾಮಿಗಳು ಎಂದೂ ಹೆಸರುಂಟು.

ನಮ್ಮವರು-ಶಿವಶರಣರು. ಪಡುಳ-ಕ್ಷೇಮ.

(೫) "ಪರತತ್ವದ ಬೆಳೆ"—

ಸರ್ಪಭೂಷಣಶಿವಯೋಗಿಗಳ ಕಾಲ ಕ್ರಿ. ಶ. ೧೭೬೫-೧೮೩೯. ಅವರ ಕೈವಲ್ಯಕಲ್ಪವಲ್ಲರಿಯಿಂದ ಈ ಗೀತವನ್ನು ತೆಗೆದುಕೊಂಡಿದೆ.

---

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೧ | ೧೭ | ವೆದೇಹಿ | ವೈದೇಹಿ |
| ೭೬ | ೧೮ | ಪ್ರಾಕೃನಾಮತರೂಪ | ಪ್ರಾಕೃತನಾಮರೂಪ |